ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಇದು ಮೌಲಾನಾ ಸಯ್ಯಿದ್ ಅಬುಲ್ ಆಲಾ ಮೌದೂದಿಯವರ 'ಸೂದ್' ಎಂಬ ಉರ್ದು ಗ್ರಂಥದ ಆಯ್ದ ಅಧ್ಯಾಯಗಳ ಕನ್ನಡಾನುವಾದ ಕೃತಿ. ಇದನ್ನು ಸಯ್ಯಿದ್ ಮೌದೂದಿಯವರು 1936ರಿಂದ 1960ರ ವರೆಗೆ ಬಡ್ಡಿಯ ವಿಷಯದಲ್ಲಿ ಬರೆದ ವಿವಿಧ ಲೇಖನಗಳಿಂದ ಆಯ್ದು ರಚಿಸಲಾಗಿತ್ತು.

ಇಸ್ಲಾಮ್ ಸ್ಥಾಪಿಸಿದ ಆರ್ಥಿಕ ವ್ಯವಸ್ಥೆಯು ಇಂದು ಸಂಪೂರ್ಣ ಅಸ್ತವ್ಯಸ್ತಗೊಂಡಿದೆ. ಅದರ ತತ್ವ ಸಿದ್ಧಾಂತಗಳೂ ಮುಸ್ಲಿಮರ ಮನದಿಂದ ಮರೆಯಾಗಿವೆ. ನಮ್ಮ ಸುತ್ತಮುತ್ತಲಿರುವ ಆರ್ಥಿಕ ವ್ಯವಸ್ಥೆಯು ಬಂಡವಾಳಶಾಹಿತ್ವ(Capitalism)ದ ಆಧಾರದಲ್ಲಿ ನಡೆಯುತ್ತಿದೆ. ನಮ್ಮ ಮನ-ಮಸ್ತಿಷ್ಕಗಳ ಮೇಲೂ ಅದು ಗಾಢವಾದ ಪ್ರಭಾವವನ್ನು ಬೀರಿದೆ. ಆದ್ದರಿಂದ ಯಾವುದೇ ಆರ್ಥಿಕ ವಿಷಯಗಳಿಗೆ ಸಂಬಂಧಿಸಿದಂತೆ ನಮ್ಮ ದೃಷ್ಟಿಕೋನವು ಬಂಡವಾಳಶಾಹಿತ್ವದ ದೃಷ್ಟಿಕೋನವೇ ಆಗಿರುತ್ತದೆ. ಆದರೆ ಇಸ್ಲಾಮಿನ ಆರ್ಥಿಕ ವ್ಯವಸ್ಥೆ ಮತ್ತು ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯು ತೀರಾ ಭಿನ್ನವಾಗಿವೆ. ಅವುಗಳ ಧ್ಯೇಯ, ಸ್ಫೂರ್ತಿ ಮತ್ತು ಪರಿಣಾಮಗಳ ಮಧ್ಯೆ ಅಜಗಜಾಂತರ ವಿದೆ. ಆದ್ದರಿಂದ ಬಂಡವಾಳಶಾಹಿ ತತ್ವಸಿದ್ಧಾಂತಗಳನ್ನು ಒಪ್ಪಿಕೊಂಡು ಇಸ್ಲಾಮಿನ ಯಾವುದೇ ವಿಧಿಯನ್ನು ಅವಲೋಕಿಸುವುದು ತಪ್ಪು.

ಈ ಕಾರಣದಿಂದಲೇ ನಮ್ಮ ಬುದ್ಧಿಜೀವಿಗಳು ಮತ್ತು ಆರ್ಥಿಕ ತಜ್ಞರು ಇಸ್ಲಾಮೀ ವಿಧಿಗಳನ್ನು ಅರ್ಥ ಮಾಡುವುದರಲ್ಲಿ ಎಡವಿ ಬೀಳುತ್ತಾರೆ. ಬಡ್ಡಿಯ ಕುರಿತ ಇಸ್ಲಾಮೀ ಕಾನೂನನ್ನು ತಿಳಿಯುವಲ್ಲಿ ಅವರಿಗೆ ಎಡವಟ್ಟಾಗಿರುವುದನ್ನು ಈ ಹಿನ್ನೆಲೆಯಲ್ಲೇ ವೀಕ್ಷಿಸಬೇಕು.

ಕನ್ನಡ ಸಾಹಿತ್ಯದಲ್ಲಿ ಬಡ್ಡಿಯ ಕುರಿತು ಇದು ನಮ್ಮ ಎರಡನೆಯ ಪ್ರಕಟಣೆ. ಈ ಹಿಂದೆ 'ಬ್ಯಾಂಕಿನ ಬಡ್ಡಿ' ಎಂಬ ಡಾ| ಯೂಸುಫುಲ್ ಕರ್ಝಾವಿಯವರ ಪುಸ್ತಕವನ್ನು ಪ್ರಕಟಿಸಲಾಗಿತ್ತು. ಇಸ್ಲಾಮ್ ಬಡ್ಡಿಯನ್ನು ನಿಷೇಧಿಸಿರುವುದರ ಕಾರಣಗಳನ್ನು ಆಳವಾಗಿ ಅಭ್ಯಸಿಸಿ ಅದನ್ನು ವೈಚಾರಿಕವಾಗಿ ಮನಗಾಣಿಸುವ ಪ್ರಯತ್ನ ಈ ಗ್ರಂಥದಲ್ಲಿ ಮಾಡಲಾಗಿದೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಬಡ್ಡಿಯ ನಕಾರಾತ್ಮಕ ಅಂಶಗಳು

ಇಸ್ಲಾಮಿ ಆರ್ಥಿಕ ವ್ಯವಸ್ಥೆಯಲ್ಲಿ ನಾಲ್ಕು ವಿಷಯಗಳಿಗೆ ಮೂಲಭೂತ ಮಹತ್ವವಿದೆ:

1. **ಕೆಲವು ನಿಯಮ-ನಿಬಂಧನೆಗಳೊಂದಿಗೆ ಮುಕ್ತ ಆರ್ಥಿಕತೆ.**
2. **ಝಕಾತ್‌ನ ಕಡ್ಡಾಯ ವ್ಯವಸ್ಥೆ.**
3. **ವಾರೀಸು ಹಕ್ಕು.**
4. **ಬಡ್ಡಿಯ ನಿಷೇಧ.**

ಅನಿಯಂತ್ರಿತ ಬಂಡವಾಳಶಾಹಿತ್ವದ ಕೆಡುಕುಗಳು ಹಾಗೂ ಸಮತಾವಾದ ಮತ್ತು ಫ್ಯಾಸಿಸ್ಟ್ ವ್ಯವಸ್ಥೆಗಳ ದೋಷಗಳು ಯಾರ ಮುಂದೆ ಅನಾವರಣಗೊಂಡಿದೆಯೋ ಅವರೆಲ್ಲರೂ ಈ ಪೈಕಿ ಮೊದಲನೆಯ ವಿಷಯವನ್ನು ಮೂಲಭೂತವಾಗಿ ಸರಿಯೆಂದು ಅಂಗೀಕರಿಸುತ್ತಾರೆ. ಅದರ ವಿವರಣೆಗಳ ಬಗ್ಗೆ ಮಾತ್ರ ಜನಮನಗಳಲ್ಲಿ ಈಗಲೂ ಕೆಲವು ಸಿಕ್ಕುಗಳಿವೆ.

ಝಕಾತ್‌ನ ಕಡ್ಡಾಯ ವ್ಯವಸ್ಥೆಯ ಮಹತ್ವವೂ ಈಗ ಹೆಚ್ಚಿನಂಶ ಲೋಕದ ಮುಂದೆ ಸ್ಪಷ್ಟವಾಗಿದೆ. ಸಮತಾವಾದ, ಫ್ಯಾಸಿಸಮ್ ಮತ್ತು ಬಂಡವಾಳಶಾಹಿತ್ವ ಪ್ರಜಾಸತ್ತೆಗಳಲ್ಲಿರುವ ಸಾಮಾಜಿಕ ವಿಮೆಯ(Social Insurance) ವ್ಯವಸ್ಥೆಗಿಂತಲೂ ವಿಶಾಲವಾದ ರೀತಿಯಲ್ಲಿ 'ಝಕಾತ್' ಸಾಮಾಜಿಕ ವಿಮೆಯ ವ್ಯವಸ್ಥೆ ಮಾಡುತ್ತದೆ. ಝಕಾತ್‌ನ ವಿಸ್ತೃತವಾದ ನಿಯಮಗಳು ನಮ್ಮ ಮುಂದಿಲ್ಲದ ಕಾರಣ ಇಲ್ಲಿಯೂ ಕೆಲವು ಗೊಂದಲಗಳಿವೆ. ಒಂದು ಆಧುನಿಕ ರಾಷ್ಟ್ರದ ಹಣಕಾಸು ವ್ಯವಸ್ಥೆಯಲ್ಲಿ ಝಕಾತ್ ಮತ್ತು ಉಶ್ರ್‌ಗಳನ್ನು ಯಾವ ರೀತಿ ಅಳವಡಿಸುವುದೆಂಬ ಬಗ್ಗೆ ತಿಳಿಯುವುದು ಜನರಿಗೆ ಕಷ್ಟವಾಗಿದೆ.

ವಾರೀಸು ಹಕ್ಕಿನ ಬಗ್ಗೆ ಲೋಕದ ಇತರೆಲ್ಲ ಕಾನೂನುಗಳಿಗಿಂತ ಭಿನ್ನವಾದ ಒಂದು ನಿಲುವನ್ನು ಇಸ್ಲಾಮ್ ತಾಳಿದೆ. ಅದರ ಹಿಂದಿರುವ ಔಚಿತ್ಯಗಳ ಬಗ್ಗೆ ಅನೇಕ ಜನರಿಗೆ ತಿಳುವಳಿಕೆಯಿರಲಿಲ್ಲ. ಅದರ ಬಗ್ಗೆ ಅವರು ತರತರದ ಆಕ್ಷೇಪಗಳನ್ನು ಮುಂದಿಡುತ್ತಿದ್ದರು. ಆದರೆ ಇಂದು ಜಗತ್ತು ಹಂತ ಹಂತವಾಗಿ ಆ ಕಾನೂನಿನ ಕಡೆಗೆ ವಾಲುತ್ತಿದೆ. ಕಮ್ಯೂನಿಸ್ಟ್ ರಶ್ಯಾ ಕೂಡಾ ಅದರ ಮೊರೆ ಹೋಗಬೇಕಾಯಿತು.[1]

---

1. ಸೋವಿಯತ್ ರಶ್ಯಾದಲ್ಲಿ ಪ್ರಚಲಿತವಿರುವ ವಾರೀಸು ಹಕ್ಕು ಕಾನೂನಿನಲ್ಲಿ ಪತಿ, ಪತ್ನಿ, ಮಕ್ಕಳು, ತಂದೆ-ತಾಯಿಗಳು, ಸೋದರ-ಸೋದರಿಯರು ಮತ್ತು ದತ್ತು ಮಕ್ಕಳಿಗೆ ವಾರೀಸು ಹಕ್ಕು ನೀಡಲಾಗಿದೆ.

ಆದರೆ ಈ ಪಟ್ಟಿಯಲ್ಲಿರುವ ನಾಲ್ಕನೆಯ ವಿಷಯವನ್ನು ತಿಳಿಯುವಲ್ಲಿ ಇಂದಿನ ಕಾಲದ ಜನರಿಗೆ ಬಹಳ ಕಷ್ಟಗಳೆದುರಾಗುತ್ತವೆ. ಶತಮಾನಗಳಿಂದ ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯ ಜ್ಞಾನವು, ಬಡ್ಡಿಯ ನಿಷೇಧವು ಕೇವಲ ಒಂದು ಭಾವುಕ ಕಲ್ಪನೆಯಾಗಿದೆ ಎಂಬ ವಿಚಾರವನ್ನು ಜನಮನಗಳಲ್ಲಿ ಬಲವಾಗಿ ಬೇರೂರಿಸಿದೆ. ಅದರ ಪ್ರಕಾರ ಬಡ್ಡಿಯಿಲ್ಲದೆ ಯಾರಿಗಾದರೂ ಸಾಲ ನೀಡುವುದು ಒಂದು ನೈತಿಕ ಔದಾರ್ಯವಾಗಿದೆ. ಅದರ ಬೇಡಿಕೆಯನ್ನು ಧರ್ಮವು ಅತಿಶಯವಾದ ರೂಪದಲ್ಲಿ ಮುಂದಿರಿಸಿದೆ. ತಾರ್ಕಿಕವಾಗಿಯಂತೂ ಬಡ್ಡಿಯು ಒಂದು ಉಪಯುಕ್ತ ವಸ್ತುವಾಗಿದೆ. ಆರ್ಥಿಕ ನೆಲೆಯಲ್ಲಿ ಅದು ಆಕ್ಷೇಪಾರ್ಹವಲ್ಲ ಮಾತ್ರವಲ್ಲ ವ್ಯಾವಹಾರಿಕವಾಗಿ ಅದು ಅಗತ್ಯವಾಗಿದೆ. ಈ ತಪ್ಪು ಸಿದ್ಧಾಂತ ಮತ್ತು ಅದರ ಅಬ್ಬರದ ಪ್ರಚಾರದ ಪ್ರಭಾವದಿಂದಾಗಿ ಆಧುನಿಕ ಬಂಡವಾಳ ಶಾಹಿತ್ವದ ಎಲ್ಲ ಕುಂದು ಕೊರತೆಗಳನ್ನು ಜಗತ್ತು ಅಂಗೀಕರಿಸಿದರೂ ಅದರ ಅತಿದೊಡ್ಡ ಮೂಲಭೂತ ಕೆಡುಕಿನ ಕಡೆಗೆ ಯಾವ ವಿಮರ್ಶಕನ ದೃಷ್ಟಿಯೂ ಹರಿಯುವುದಿಲ್ಲ. ಎಲ್ಲಿಯ ವರೆಗೆಂದರೆ ಬ್ರಿಟನ್ ಮತ್ತು ಅಮೇರಿಕಾಗಳಂತೆ ರಶ್ಯಾದ ಕಮ್ಯೂನಿಷ್ಟರು ಕೂಡಾ ತಮ್ಮ ದೇಶದಲ್ಲಿ ಈ ಪಾಪ ಜನನಿಯನ್ನು ಪೋಷಿಸುತ್ತಿರುವರು. ಪಾಶ್ಚಾತ್ಯರ ಈ ದಾರಿಗೆಡಿಸುವ ಪ್ರಚಾರದಿಂದ ಸ್ವಯಂ ಮುಸ್ಲಿಮರೂ ಪ್ರಭಾವಿತರಾಗದೆ ಉಳಿದಿಲ್ಲ. ಅವರಂತೂ ಜಗತ್ತಿನಲ್ಲಿ ಬಡ್ಡಿಯ ಅತಿದೊಡ್ಡ ಶತ್ರುವಾಗಿರಬೇಕಾಗಿತ್ತು. ವೈಯಕ್ತಿಕ ಅಗತ್ಯಗಳಿಗಾಗಿ ಜನರು ಸಾಲದ ಮೇಲೆ ಬಡ್ಡಿ ಪಡೆದಾಗ ಮಾತ್ರ ಬಡ್ಡಿಯು ಆಕ್ಷೇಪಾರ್ಹ ವಿಷಯವಾಗುವುದು ಎಂಬ ತಪ್ಪುಕಲ್ಪನೆ ನಮ್ಮ ಪತನೋನ್ಮುಖಿ ಧಾರ್ಮಿಕ ವಿಭಾಗದಲ್ಲೂ ವ್ಯಾಪಿಸಿದೆ. ಅವರ ದೃಷ್ಟಿಯಲ್ಲಿ ವ್ಯಾಪಾರದಲ್ಲಿ ತೊಡಗಿಸಲಿಕ್ಕಾಗಿ ಪಡೆಯುವ ಸಾಲದ ಮೇಲಿನ ಬಡ್ಡಿಯಂತೂ ಸಂಪೂರ್ಣವಾಗಿ ಧರ್ಮಸಮ್ಮತ ಮತ್ತು ತರ್ಕ ಸಂಗತವಾಗಿದೆ. ಅದರಲ್ಲಿ ಧಾರ್ಮಿಕ, ನೈತಿಕ, ವೈಚಾರಿಕ ಮತ್ತು ಆರ್ಥಿಕ ಸಿದ್ಧಾಂತದ ದೃಷ್ಟಿಯಿಂದ ಯಾವುದೇ ಅನೌಚಿತ್ಯವಿಲ್ಲವೆಂಬುದೇ ಅವರ ಭಾವನೆ. ಪುರಾತನ ಕಾಲದ ಸಾಹುಕಾರರು ಮತ್ತು ಬನಿಯಾಗಳು ಪಡೆಯುತ್ತಿದ್ದ ಬಡ್ಡಿಗೂ ಪ್ರಸಕ್ತ ಬ್ಯಾಂಕಿಂಗ್ ಪದ್ಧತಿಗೂ ಅಜಗಜಾಂತರವಿದೆ ಎಂದು ಅವರು ಭಾವಿಸುತ್ತಾರೆ. ಪ್ರಚಲಿತ ಬ್ಯಾಂಕಿಂಗ್ ವ್ಯವಸ್ಥೆಯ 'ಶುದ್ಧ' ವ್ಯವಹಾರವು ಧರ್ಮಸಮ್ಮತವಾಗಿದ್ದು ಅದರೊಂದಿಗೆ ಎಲ್ಲ ರೀತಿಯ ಸಂಬಂಧವನ್ನು ಇರಿಸಬಹುದಾಗಿದೆ. ಇದೇ ಕಾರಣದಿಂದ ಈಗ ಬಡ್ಡಿಯ ಶರಈ

---

ಒಬ್ಬನು ತನ್ನ ಬಡ ಕುಟುಂಬಿಕರಿಗೆ ಮತ್ತು ಸಾರ್ವಜನಿಕ ಸಂಸ್ಥೆಗಳಿಗೆ ತನ್ನ ಸೊತ್ತನ್ನು ವಿತರಿಸಬೇಕೆಂಬ ಉಯಿಲನ್ನು ಕೂಡಾ ಮಾಡಬಹುದಾಗಿದೆ. ಆದರೆ ಸಂಬಂಧಿಕರ ಹಕ್ಕಿಗೆ ಆದ್ಯತೆ ನೀಡಲಾಗಿದೆ. ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ಮತ್ತು ಬಡ ವಾರೀಸುದಾರರನ್ನು ವಾರೀಸು ಹಕ್ಕಿನಿಂದ ವಂಚಿಸುವ ಉದ್ದೇಶ ಹೊಂದಿದ ಉಯಿಲನ್ನು ನಿಷೇಧಿಸಲಾಗಿದೆ. 'ಸಮತಾವಾದಿ ಪ್ರಗತಿಪರರು' 1945ರಲ್ಲಿ ಜಾರಿಗೆ ತಂದ ಈ ಕಾನೂನನ್ನು ನೋಡಿದರೆ ಇದು ಕ್ರಿ.ಶ. 625ರಲ್ಲಿ ರಚಿಸಲಾದ ಇಸ್ಲಾಮೀ ವಾರೀಸು ಹಕ್ಕು ಕಾನೂನಿನ ಕಡೆಗೆ ಮರಳುವಿಕೆಯಾಗಿದೆ ಎಂಬುದನ್ನು ಯಾರೂ ಗ್ರಹಿಸದಿರಲಾರರು.

(ಧರ್ಮಶಾಸ್ತ್ರೀಯ) ವ್ಯಾಖ್ಯೆಯನ್ನು ಬದಲಾಯಿಸುವ ಪ್ರಯತ್ನಗಳು ನಡೆಯುತ್ತಿವೆ. ಕುರ್‌ಆನಿನಲ್ಲಿ ಯಾವ ಬಡ್ಡಿಯನ್ನು 'ಹರಾಮ್'(ನಿಷಿದ್ಧ)ಗೊಳಿಸಲಾಗಿದೆಯೋ ಅದರ ಅರ್ಥವ್ಯಾಪ್ತಿಯಲ್ಲಿ ಬ್ಯಾಂಕಿನ ಬಡ್ಡಿ ಬರುವುದಿಲ್ಲವೆಂದೇ ಪ್ರತಿಪಾದಿಸಲಾಗುತ್ತಿದೆ. ಈ ಎಲ್ಲ ಭ್ರಮೆಗಳಿಂದ ಯಾರು ಮುಕ್ತರಾಗಿರುವರೋ ಅವರು ಕೂಡಾ ಬಡ್ಡಿಯನ್ನು ಪೂರ್ಣವಾಗಿ ನಿಷೇಧಿಸಿದ ಬಳಿಕ ಆಧುನಿಕ ಕಾಲದ ಆರ್ಥಿಕ ವ್ಯವಸ್ಥೆಯನ್ನು ಯಾವ ರೀತಿ ಸ್ಥಾಪಿಸುವುದು ಎಂಬುದನ್ನು ತಿಳಿಯಲಾರದೆ ತೊಳಲಾಡುತ್ತಿದ್ದಾರೆ.

ಮುಂದಿನ ಪುಟಗಳಲ್ಲಿ ನಾವು ಈ ಸಮಸ್ಯೆಗಳನ್ನೇ ಪರಿಹರಿಸಲು ಪ್ರಯತ್ನಿಸುವೆವು.

## ಬಡ್ಡಿಯ ಬೌದ್ಧಿಕ ಸಮರ್ಥನೆಗಳು

ಮೊಟ್ಟಮೊದಲು ಒಂದು ವಿಷಯದ ತೀರ್ಮಾನವಾಗಬೇಕು. ಬಡ್ಡಿಯು ವಾಸ್ತವದಲ್ಲಿ ಒಂದು ಸಮರ್ಥನೀಯ ವಿಷಯವೇ? ಒಬ್ಬ ವ್ಯಕ್ತಿ ತಾನು ನೀಡಿದ ಸಾಲಕ್ಕೆ ಬಡ್ಡಿಯನ್ನು ಬಯಸುವುದು ಬೌದ್ಧಿಕವಾಗಿ ಸಮರ್ಥನೀಯವೇ? ಯಾರಿಂದಾದರೂ ಸಾಲ ಪಡೆದ ವ್ಯಕ್ತಿಯು ಅವನಿಗೆ ಮೂಲದ ಜತೆಗೆ ಏನನ್ನಾದರೂ ಸೇರಿಸಿ ಕೊಡುವುದು ನ್ಯಾಯ ಸಮ್ಮತವೇ? ಇದು ಈ ಚರ್ಚೆಯ ಪ್ರಪ್ರಥಮ ಪ್ರಶ್ನೆಯಾಗಿದೆ. ಇದು ಇತ್ಯರ್ಥವಾದರೆ ಅರ್ಧಕ್ಕಿಂತಲೂ ಹೆಚ್ಚಿನ ಚರ್ಚೆ ಇತ್ಯರ್ಥವಾದಂತೆ. ಏಕೆಂದರೆ ಬಡ್ಡಿಯು ವೈಚಾರಿಕವಾಗಿ ಒಂದು ಸಮರ್ಥನೀಯ ವಿಷಯವೆಂದಾದರೆ ಬಡ್ಡಿ ನಿಷೇಧದ ಈ ಮೊಕದ್ದಮೆಯಲ್ಲಿ ಜೀವವೇ ಇರುವುದಿಲ್ಲ. ಒಂದು ವೇಳೆ ಬಡ್ಡಿಯನ್ನು ಬುದ್ಧಿ ಮತ್ತು ನ್ಯಾಯದ ಆಧಾರದಲ್ಲಿ ಸರಿಯೆಂದು ಸಮರ್ಥಿಸಲಾಗದಿದ್ದರೆ ಒಂದು ಅನುಚಿತ ಮತ್ತು ಅವೈಚಾರಿಕ ವಸ್ತುವನ್ನು ಸಮಾಜದಲ್ಲಿ ಮುಂದುವರಿಸಿಕೊಂಡು ಹೋಗಬೇಕೆಂದು ಪಟ್ಟು ಹಿಡಿಯುವುದೇಕೆ ಎಂಬುದರ ಬಗ್ಗೆ ವಿಚಾರ ಮಾಡಬೇಕಾಗುತ್ತದೆ.

## ಪ್ರಥಮ ಸಮರ್ಥನೆ

ಈ ಪ್ರಶ್ನೆಯ ಉತ್ತರದ ರೂಪದಲ್ಲಿ ನಮ್ಮ ಮುಂದೆ ಬರುವ ಪ್ರಥಮ ಸಮರ್ಥನೆ ಈ ರೀತಿಯಿದೆ: ತನ್ನ ಉಳಿತಾಯದ ಹಣವನ್ನು ಒಬ್ಬನಿಗೆ ಸಾಲ ನೀಡುವವನು ತನ್ನನ್ನು ಅಪಾಯಕ್ಕೊಡ್ಡುತ್ತಾನೆ, ತ್ಯಾಗ ಮಾಡುತ್ತಾನೆ, ತನ್ನ ಅಗತ್ಯವನ್ನು ಬದಿಗೊತ್ತಿ ಇನ್ನೊಬ್ಬನ ಅಗತ್ಯವನ್ನು ಪೂರೈಸುತ್ತಾನೆ. ಯಾವ ಸೊತ್ತಿನಿಂದ ಅವನು ಸ್ವತಃ ಪ್ರಯೋಜನ ಪಡೆಯಬಹುದಾಗಿತ್ತೋ ಅದನ್ನು ಇನ್ನೊಬ್ಬನಿಗೆ ನೀಡುತ್ತಾನೆ. ಒಂದು ವೇಳೆ ಸಾಲ ಪಡೆದವನು ತನ್ನ ವೈಯಕ್ತಿಕ ಅಗತ್ಯವನ್ನು ಪೂರೈಸಲಿಕ್ಕಾಗಿ ಸಾಲ ಪಡೆದಿದ್ದರೆ ಅವನು ಮನೆ ಅಥವಾ ಪೀಠೋಪಕರಣಗಳಿಗೆ ಬಾಡಿಗೆ ನೀಡುವಂತೆ ಅವನ ಆ ಹಣಕ್ಕೆ ಬಾಡಿಗೆ ನೀಡಬೇಕು! ಸಾಲ ನೀಡಿದವನು ತನ್ನ ಶ್ರಮದ ದುಡಿಮೆಯನ್ನು ತಾನು ಉಪಯೋಗಿಸುವ ಬದಲು ಅವನ ಉಪಯೋಗಕ್ಕಾಗಿ ನೀಡಿದುದರಿಂದ ಈ ಬಾಡಿಗೆಯು ಆ ಅಪಾಯದ ಪ್ರತಿಫಲವಾಗಿದೆ.

ಸಾಲಗಾರನು ಸಾಲವನ್ನು ಯಾವುದಾದರೂ ಲಾಭದಾಯಕ ಕೆಲಸದಲ್ಲಿ ತೊಡಗಿಸಲಿಕ್ಕಾಗಿ ಪಡೆದಿದ್ದರೆ ಅವನಿಂದ ಬಡ್ಡಿ ಪಡೆಯುವ ಹಕ್ಕಂತೂ ಇನ್ನಷ್ಟು ಹೆಚ್ಚುತ್ತದೆ. ಸಾಲಗಾರನು ತಾನು ಪಡೆದ ಸಾಲದಿಂದ ಲಾಭ ಗಳಿಸುವಾಗ ಅದರ ಒಂದು ಪಾಲನ್ನು ಸಾಲ ನೀಡಿದವನು ಯಾಕೆ ಪಡೆಯಬಾರದು?

ಈ ಸಮರ್ಥನೆಯಲ್ಲಿರುವ ಒಂದು ಭಾಗವು ಸರಿಯಾಗಿಯೇ ಇದೆ. ಸಾಲ ಕೊಡುವವನು ಅಪಾಯವನ್ನು ಎದುರಿಸುತ್ತಾನೆ. ತ್ಯಾಗವನ್ನೂ ಮಾಡುತ್ತಾನೆ. ಆದರೆ ಈ ಅಪಾಯ ಅಥವಾ ತ್ಯಾಗದ ಬೆಲೆಯನ್ನು ಶೇ. 5 ಅಥವಾ ಶೇ. 10ರ ದರದಲ್ಲಿ ವಾರ್ಷಿಕ, ತ್ರೈಮಾಸಿಕ ಅಥವಾ ಮಾಸಿಕ ಲೆಕ್ಕದಲ್ಲಿ ಪಡೆಯುವ ಹಕ್ಕು ಅವನಿಗೆ ಸಿಗುತ್ತದೆಂದು ಇದರಿಂದ ಹೇಗೆ ಸಾಬೀತಾಗುತ್ತದೆ? ಅಪಾಯದ ನಿವಾರಣೆಗಾಗಿ ಅವನು ಸಾಲಗಾರನಿಂದ ಏನನ್ನಾದರೂ ಅಡವು ಪಡೆಯಬಹುದು ಅಥವಾ ಅವನಿಂದ ಜಾಮೀನು ಪಡೆಯುವುದು ಕೂಡಾ ಸಮರ್ಥನೀಯವೇ. ಇನ್ನು ಅವನು ಆ ಅಪಾಯವನ್ನು ಮನಗಂಡು ಸಾಲ ನೀಡದೆಯೂ ಇರಬಹುದು. ಆದರೆ ಅಪಾಯವನ್ನು ಬೆಲೆಗೆ ವಿಕ್ರಯಿಸಲು ಅದೇನೂ ಮಾರಾಟದ ಸರಕಲ್ಲ. ಅದರ ಮೇಲೆ ಬಾಡಿಗೆ ಪಡೆಯಲು ಅದು ಮನೆ, ಪೀಠೋಪಕರಣ ಅಥವಾ ವಾಹನವೂ ಅಲ್ಲ. ಇನ್ನು ತ್ಯಾಗದ ವಿಷಯ. ಅದು ವ್ಯಾಪಾರವಾಗದಿರುವ ತನಕವೇ ತ್ಯಾಗವೆನಿಸುತ್ತದೆ. ಒಬ್ಬನು ತ್ಯಾಗ ಮಾಡುವುದಾದರೆ ತ್ಯಾಗವನ್ನೇ ಮಾಡಬೇಕು. ಅದು ಒಂದು ನೈತಿಕ ಕ್ರಿಯೆಯಾಗಿದ್ದು ಆದರಿಂದ ನೈತಿಕ ಪ್ರಯೋಜನವನ್ನೇ ಪಡೆಯಬಹುದು. ಒಂದು ವೇಳೆ ಅವನು ಪ್ರತಿಫಲದ ಮಾತಾಡುವುದಾದರೆ ಅದನ್ನು ತ್ಯಾಗವೆನ್ನುವ ಹಕ್ಕು ಅವನಿಗೆ ಉಳಿಯುವುದಿಲ್ಲ. ಸಾಲದ ಬಗ್ಗೆ ಅಸಲಿನ ಮೇಲೆ ಮಾಸಿಕ ಅಥವಾ ವಾರ್ಷಿಕ ದರದಲ್ಲಿ ಹೆಚ್ಚುವರಿ ಹಣ ಪಡೆಯುವ ಅಧಿಕಾರ ಅವನಿಗೆ ಹೇಗೆ ಬಂತೆಂದು ನೇರವಾಗಿ ಹೇಳಬೇಕು.

ಇದು ನಷ್ಟಭರ್ತಿಯೇ? ಅವನು ಸಾಲ ನೀಡಿದ ಹಣ ಅವನ ಅಗತ್ಯಕ್ಕಿಂತ ಹೆಚ್ಚಿನದಾಗಿತ್ತು. ಅವನು ಸ್ವತಃ ಅದನ್ನು ಉಪಯೋಗಿಸುತ್ತಿರಲಿಲ್ಲ. ಇಲ್ಲಿ ವಾಸ್ತವದಲ್ಲಿ ಯಾವ ನಷ್ಟವೂ ಉಂಟಾಗಿಲ್ಲ. ಆದ್ದರಿಂದ ನೀಡಿದ ಸಾಲಕ್ಕೆ 'ನಷ್ಟಭರ್ತಿ' ಪಡೆಯುವ ಹಕ್ಕೇ ಅವನಿಗಿರುವುದಿಲ್ಲ.

ಇದು ಬಾಡಿಗೆಯೇ? ಬಾಡಿಗೆದಾರನಿಗಾಗಿ ಯಾವ ವಸ್ತುವನ್ನು ಒದಗಿಸಲು ಮತ್ತು ಅದನ್ನು ಸುಸ್ಥಿತಿಯಲ್ಲಿಡಲು ಒಬ್ಬ ವ್ಯಕ್ತಿಯು ತನ್ನ ಸಮಯ, ಶ್ರಮ ಮತ್ತು ಹಣವನ್ನು ವ್ಯಯಿಸುತ್ತಾನೋ ಮತ್ತು ಯಾವ ವಸ್ತು ಬಾಡಿಗೆದಾರನ ಉಪಯೋಗದಿಂದ ಕೆಡುತ್ತದೋ ಸವೆಯುತ್ತದೋ ಹಳತಾಗುತ್ತದೋ ಹಾಗೂ ತನ್ನ ಮೌಲ್ಯವನ್ನು ಕಳಕೊಳ್ಳುತ್ತದೋ ಅಂತಹ ವಸ್ತುಗಳಿಗೆ ಮಾತ್ರ ಬಾಡಿಗೆ ಅನ್ವಯವಾಗುತ್ತದೆ. ಉದಾ: ಉಪಯೋಗದ ವಸ್ತುಗಳಾದ ಮನೆ, ಪೀಠೋಪಕರಣ, ವಾಹನ ಇತ್ಯಾದಿ. ಇವುಗಳ ಬಾಡಿಗೆ ಮಾತ್ರ ಸಮರ್ಥನೀಯ ವೆನಿಸುತ್ತದೆ. ಆದರೆ ಈ ವ್ಯಾಖ್ಯೆಯು ಖಂಡಿತವಾಗಿಯೂ ಗ್ರಾಹಕ ವಸ್ತುಗಳಾದ ಧಾನ್ಯ,

ಹಣ್ಣು ಹಂಪಲು ಮತ್ತು ರೂಪಾಯಿಗೆ ಅನ್ವಯಿಸುವುದಿಲ್ಲ. ರೂಪಾಯಿಯು ವಸ್ತು ಮತ್ತು ಸೇವೆಗಳನ್ನು ಖರೀದಿಸುವ ಒಂದು ಮಾಧ್ಯಮವಾಗಿದೆ. ಆದ್ದರಿಂದ ಈ ವಸ್ತುಗಳ ಮೇಲೆ ಬಾಡಿಗೆ ವಸೂಲಿ ಮಾಡುವುದು ಅರ್ಥಹೀನವಾಗಿದೆ.

ಸಾಲ ನೀಡುವವನು ಹೆಚ್ಚೆಂದರೆ ಹೀಗೆ ಹೇಳಬಹುದು: "ನಾನು ನನ್ನ ಹಣದಿಂದ ಇನ್ನೊಬ್ಬನಿಗೆ ಲಾಭ ಪಡೆಯುವ ಅವಕಾಶ ನೀಡುವುದರಿಂದ ನನಗೆ ಆ ಲಾಭದಲ್ಲಿ ಒಂದಂಶ ಸಿಗಬೇಕು." ಇದು ಒಂದು ಸಮರ್ಥನೀಯ ಬೇಡಿಕೆ. ಆದರೆ ಇಲ್ಲಿ ಒಂದು ಪ್ರಶ್ನೆ ಏಳುತ್ತದೆ. ಓರ್ವ ಹಸಿದ ವ್ಯಕ್ತಿ ನಿಮ್ಮಿಂದ 50 ರೂಪಾಯಿ ಸಾಲ ಪಡೆದು ತನ್ನ ಮತ್ತು ತನ್ನ ಹಸಿದ ಮಡದಿ-ಮಕ್ಕಳ ಹೊಟ್ಟೆ ತುಂಬುತ್ತಾನೆಂದಾದರೆ ಅವನಿಂದ ನೀವು ಮಾಸಿಕ 2ಶೇಕಡಾದಂತೆ ಬಡ್ಡಿ ಪಡೆಯುವಂತಹ ಲಾಭವನ್ನು ಆತ ಗಳಿಸುತ್ತಾನೆಯೇ? ಅವನಿಗೆ ಅದರಿಂದ ಉಪಯೋಗವಾಗುತ್ತದೆ ನಿಜ. ಆ ಉಪಯೋಗದ ಅವಕಾಶವನ್ನು ನೀವೇ ನೀಡಿರುವಿರಿ ಎಂಬುದೂ ನಿಜ. ಆದರೆ ಅದಕ್ಕೆ ಬೆಲೆ ಕಟ್ಟಲು, ಸಾಲಗಾರನ ಸಂಕಷ್ಟ ಹೆಚ್ಚಾದಂತೆಲ್ಲಾ ಬೆಲೆಯನ್ನು ಹೆಚ್ಚಿಸುತ್ತಿರಲು ಮತ್ತು ಅವನ ಆ ಕಷ್ಟದ ಅವಧಿ ದೀರ್ಘವಾದಂತೆಲ್ಲಾ ಅದರ ದರವನ್ನು ಏರಿಸುತ್ತಿರಲು ಬುದ್ಧಿ, ನ್ಯಾಯ, ಅರ್ಥಶಾಸ್ತ್ರ, ವ್ಯಾಪಾರ ಧರ್ಮದ ಪೈಕಿ ಯಾವುದರ ಸಮರ್ಥನೆಯಾದರೂ ನಿಮಗಿದೆಯೇ? ಒಂದು ವೇಳೆ ಕಷ್ಟದಲ್ಲಿರುವವನಿಗೆ ನಿಮ್ಮ ಅಗತ್ಯಕ್ಕಿಂತ ಹೆಚ್ಚಿರುವ ಹಣವನ್ನು ದಾನ ಮಾಡುವಷ್ಟು ಹೃದಯ ವೈಶಾಲ್ಯ ನಿಮಗಿಲ್ಲದಿದ್ದರೆ ಕನಿಷ್ಠಪಕ್ಷ ಸಾಲ ಮರುಪಾವತಿಯನ್ನು ಖಾತ್ರಿ ಪಡಿಸಿಕೊಂಡು ಅವನಿಗೆ ಸಾಲವಾದರೂ ನೀಡಬಹುದಲ್ಲವೇ? ಅದಕ್ಕೂ ನಿಮ್ಮ ಮನಸ್ಸು ಸಿದ್ಧವಾಗುವುದಿಲ್ಲವೆಂದಾದರೆ ಅವನಿಗೆ ಕೊಡದೇ ಇರುವುದೇ ಉತ್ತಮ. ಆದರೆ ಒಬ್ಬನ ಸಂಕಷ್ಟವು ನಿಮ್ಮ ಪಾಲಿಗೆ ಲಾಭ ಗಳಿಸುವ ಒಂದು ಅವಕಾಶವಾಗುವುದು, ಮರಣಶಯ್ಯೆಯಲ್ಲಿರುವ ರೋಗಿ ಮತ್ತು ಹಸಿದ ಹೊಟ್ಟೆಯು ನಿಮ್ಮ ಪಾಲಿಗೆ ಬಂಡವಾಳ ಹೂಡಿಕೆಯ ಕ್ಷೇತ್ರವಾಗುವುದು ಸರಿಯೆ? ಜನರ ಸಂಕಷ್ಟಗಳು ಹೆಚ್ಚಿದಂತೆಲ್ಲಾ ನಿಮ್ಮ ಪಾಲಿಗೆ ಲಾಭ ಗಳಿಕೆಯ ಅವಕಾಶಗಳೂ ಹೆಚ್ಚಾಗಬೇಕೇ?

ಒಂದು ವೇಳೆ ಸಾಲಗಾರನು ಆ ಹಣವನ್ನು ಯಾವುದಾದರೂ ವ್ಯಾಪಾರದಲ್ಲಿ ತೊಡಗಿಸಿದ್ದರೆ ನಿಮ್ಮ ಉಳಿತಾಯದಿಂದ ಪ್ರಯೋಜನ ಪಡೆಯುವ ಅವಕಾಶ ನೀಡಿದ್ದುದರ ಬೆಲೆಯನ್ನು ಪಡೆಯುವ ಅವಕಾಶ ನಿಮಗೆ ಇರಬಹುದು. ಇಂತಹ ಸ್ಥಿತಿಯಲ್ಲಿ ನನ್ನ ಹಣದಿಂದ ಬರುವ ಲಾಭದ ಒಂದು ಪಾಲು ನನಗೂ ಸಿಗಬೇಕು ಎಂದು ಹೇಳುವ ಅವಕಾಶ ಸಾಲ ನೀಡಿದವನಿಗಿದೆ. ಆದರೆ ಹಣವು ಸ್ವಯಂ ಲಾಭ ಗಳಿಸುವ ಸಾಮರ್ಥ್ಯ ಹೊಂದಿಲ್ಲ ಎಂಬುದು ವ್ಯಕ್ತ. ಅದಕ್ಕೆ ಲಾಭ ಬರಬೇಕಾದರೆ ಮನುಷ್ಯನ ಶ್ರಮ ಮತ್ತು ಬುದ್ಧಿಶಕ್ತಿ ಅದರ ಹಿಂದಿರಬೇಕು. ಮನುಷ್ಯ ಶ್ರಮ ಮತ್ತು ಬುದ್ಧಿಶಕ್ತಿಯು ಅದಕ್ಕೆ ದೊರೆತ ಕೂಡಲೇ ಅದು ಲಾಭ ನೀಡಲು ಆರಂಭಿಸುವುದಿಲ್ಲ. ಅದಕ್ಕೆ ಒಂದು ಕಾಲಾವಧಿ ಬೇಕಾಗುತ್ತದೆ. ಮಾತ್ರವಲ್ಲ ಅದರ ಲಾಭವೂ ಖಚಿತವಲ್ಲ.

ಅದರಲ್ಲಿ ನಷ್ಟದ ಸಾಧ್ಯತೆಯೂ ಇರುತ್ತದೆ. ಲಾಭದಾಯಕವಾಗಿದ್ದರೂ ಯಾವಾಗ ಎಷ್ಟು ಲಾಭ ಅದು ಗಳಿಸಬಲ್ಲದೆಂದು ಖಚಿತವಾಗಿ ಹೇಳುವಂತಿಲ್ಲ. ಹಣ ಹೂಡುವವನ ಲಾಭವು ಆತನು ಅದನ್ನು ಹೂಡಿದ ಕೂಡಲೇ ಆರಂಭವಾಗಬೇಕು. ಶ್ರಮ ಮತ್ತು ಬುದ್ಧಿಶಕ್ತಿಯನ್ನು ಅದರ ಹಿಂದೆ ತೊಡಗಿಸುವ ಮುಂಚೆಯೇ ಆರಂಭವಾಗಬೇಕು. ಮಾತ್ರವಲ್ಲ ಅದರ ದರವೂ ನಿರ್ಧಾರಗೊಳ್ಳಬೇಕು ಎನ್ನುವುದು ಎಲ್ಲಿಯ ನ್ಯಾಯ?

ಯಾರು ತನ್ನ ಉಳಿತಾಯದ ಹಣವನ್ನು ಯಾವುದಾದರೂ ಲಾಭದಾಯಕ ಕೆಲಸದಲ್ಲಿ ತೊಡಗಿಸಬಯಸುತ್ತಾನೋ ಆತ ಶ್ರಮಪಡುವವನ ಜತೆ ಪಾಲುದಾರಿಕೆಯ ವ್ಯವಹಾರ ಮಾಡಬೇಕು ಮತ್ತು ಲಾಭ-ನಷ್ಟಗಳಲ್ಲಿ ಒಂದು ನಿರ್ದಿಷ್ಟ ಪ್ರಮಾಣದ ಪಾಲುದಾರನಾಗಬೇಕು. ಇದುವೇ ಆತನಿಗಿರುವ ಸರಿಯಾದ ದಾರಿ. ನಾನು ಒಬ್ಬ ವ್ಯಕ್ತಿಯ ಪಾಲುದಾರನಾಗುವ ಬದಲು 100 ರೂಪಾಯಿ ಸಾಲ ನೀಡಿ ನೀನು ಇದರಿಂದ ಪ್ರಯೋಜನ ಪಡೆಯುವುದರಿಂದ ಪ್ರತಿ ತಿಂಗಳು ನನಗೆ ಒಂದು ರೂಪಾಯಿಯಂತೆ ಕೊಡುತ್ತಿರಬೇಕು ಎಂದು ಹೇಳುವುದು ಎಲ್ಲಿಯ ನ್ಯಾಯ? ಆ ಬಂಡವಾಳವನ್ನು ಉಪಯೋಗಿಸಿ ಅವನ ಶ್ರಮದಿಂದ ಲಾಭವಾಗಲು ತೊಡಗುವುದಕ್ಕಿಂತ ಮುಂಚೆಯೇ ಅವನು ತನ್ನ ಪಾಲು ಕೇಳಲು ಆತನಿಗೆ ದೊರಕುವ ಲಾಭವಾದರೂ ಏನು? ಒಂದು ವೇಳೆ ಅವನಿಗೆ ಲಾಭದ ಬದಲು ನಷ್ಟವಾದರೆ ಬುದ್ಧಿ ಮತ್ತು ನ್ಯಾಯದ ಪ್ರಕಾರ ನನಗೆ ಮಾಸಿಕ ಲಾಭ ಕೇಳುವ ಹಕ್ಕು ಇದೆಯೇ? ಒಂದು ವೇಳೆ ಅವನ ಲಾಭವು ತಿಂಗಳಿಗೆ ಒಂದು ರೂಪಾಯಿಗಿಂತಲೂ ಕಡಿಮೆಯಿದ್ದರೆ ನನಗೆ ಪ್ರತಿ ತಿಂಗಳು ಒಂದು ರೂಪಾಯಿ ಪಡೆಯುವ ಹಕ್ಕಿದೆಯೇ? ಒಂದು ವೇಳೆ ಅವನ ಮಾಸಿಕ ಲಾಭ ಕೇವಲ ಒಂದು ರೂಪಾಯಿಯೇ ಆಗಿದ್ದರೆ ಯಾವ ವ್ಯಕ್ತಿ ತನ್ನ ಒಂದು ತಿಂಗಳ ಸಮಯ, ಶ್ರಮ, ಸಾಮರ್ಥ್ಯ ಮತ್ತು ವೈಯಕ್ತಿಕ ಬಂಡವಾಳ ಎಲ್ಲವನ್ನೂ ಬಳಸಿಯೂ ಏನೂ ಗಳಿಸದಿರುವಾಗ ಕೇವಲ ರೂ. 100/- ನೀಡಿ ದೂರ ನಿಂತ ನಾನು, ಆತನ ಸಂಪೂರ್ಣ ಲಾಭವನ್ನು ಕಬಳಿಸುವುದು ಅನ್ಯಾಯವಲ್ಲವೇ? ಒಂದು ಎತ್ತು ಕೂಡಾ ದಿನವಿಡೀ ಗದ್ದೆ ಉಳುವ ಕೆಲಸ ಮಾಡಿದರೆ ತನ್ನ ಒಡೆಯನಿಂದ ಮೇವು ಕೇಳುವ ಹಕ್ಕನ್ನು ಪಡೆಯುತ್ತದೆ. ಆದರೆ ಈ ಬಡ್ಡಿಯ ಸಾಲವು ಒಬ್ಬ ವ್ಯಾಪಾರಿಯನ್ನು ಎಂತಹ ಎತ್ತಾಗಿ ಮಾಡುತ್ತದೆಂದರೆ ಅದು ದಿನವಿಡೀ ನನ್ನ ಗದ್ದೆಯನ್ನು ಉತ್ತ ಬಳಿಕ ಸಂಜೆ ಮೇವು ತಿನ್ನಲು ಬೇರೆಯವನಲ್ಲಿಗೆ ಹೋಗಬೇಕು.

ಒಂದು ವೇಳೆ ಓರ್ವ ವ್ಯಾಪಾರಿಯ ಲಾಭವು ಸಾಲ ನೀಡಿದವನು ವಿಧಿಸಿದ ಬಡ್ಡಿಯ ದರಕ್ಕಿಂತ ಹೆಚ್ಚಾಗಿದ್ದರೂ ಬುದ್ಧಿ, ನ್ಯಾಯ, ವ್ಯಾಪಾರ, ಧರ್ಮ ಮತ್ತು ಅರ್ಥಶಾಸ್ತ್ರದ ದೃಷ್ಟಿಯಿಂದ ಅವನು ಪಡೆಯುವ ಬಡ್ಡಿಯು ಸಮರ್ಥನೀಯವಾಗುವುದಿಲ್ಲ. ನಿಜವಾದ ಉತ್ಪಾದಕರಾದ, ಸಮಾಜದ ಅವಶ್ಯಕತೆಗಳನ್ನು ಸಿದ್ಧಗೊಳಿಸಿ ಒದಗಿಸುವವರಾದ, ಶ್ರಮ ಪಡುವವರಾದ, ತಮ್ಮ ಬೌದ್ಧಿಕ ಶಕ್ತಿಯನ್ನು ಉಪಯೋಗಿಸುವವರಾದ ವ್ಯಾಪಾರಿಗಳು, ಉದ್ಯಮಿಗಳು, ಕೃಷಿಕರು ಮತ್ತಿತರ ಉತ್ಪಾದನಾ ಕಾರ್ಯದಲ್ಲಿ ನಿರತರಾಗಿರುವವರಿಗೆ ಅವರ

ಲಾಭವು ಸಂದೇಹಾಸ್ಪದ ಮತ್ತು ಅನಿಶ್ಚಿತವಾಗಿರುತ್ತದೆ. ಆದರೆ ತನ್ನ ಉಳಿತಾಯವನ್ನು ಸಾಲದ ರೂಪದಲ್ಲಿ ನೀಡಿದವನ ಲಾಭ ಮಾತ್ರ ಖಚಿತವಾಗಿರುತ್ತದೆ. ಅವರೆಲ್ಲರಿಗೂ ನಷ್ಟದ ಭಯವೂ ಇದೆ. ಆದರೆ ಇವನಿಗೆ ಅಪ್ಪಟ ಲಾಭದ ಖಾತ್ರಿಯಿದೆ. ಅವರೆಲ್ಲರ ಲಾಭಾಂಶವು ಪೇಟೆಧಾರಣೆಯ ವ್ಯತ್ಯಾಸದೊಂದಿಗೆ ಏರುತ್ತಲೂ ಇಳಿಯುತ್ತಲೂ ಇರುತ್ತದೆ. ಆದರೆ ಇವನು ಮಾತ್ರ ತನಗಾಗಿ ನಿಶ್ಚಯಿಸಿದ ಬಡ್ಡಿಯ ದರದಲ್ಲಿ ಪ್ರತಿ ತಿಂಗಳು ಮತ್ತು ಪ್ರತಿ ವರ್ಷ ಲಾಭಾಂಶವನ್ನು ಪಡೆಯುತ್ತಲೇ ಇರುತ್ತಾನೆ.[1]

## ದ್ವಿತೀಯ ಸಮರ್ಥನೆ

ಈ ವಿಮರ್ಶೆಯಿಂದ ಸ್ಪಷ್ಟವಾಗುವುದೇನೆಂದರೆ ಮೇಲ್ನೋಟಕ್ಕೆ ಬಡ್ಡಿಯನ್ನು ಸಮರ್ಥಿಸಲು ಯಾವ ಆಧಾರಗಳನ್ನು ಪರ್ಯಾಪ್ತವೆಂದು ಪರಿಗಣಿಸಲಾಗುತ್ತದೋ ಸ್ವಲ್ಪ ಆಳಕ್ಕೆ ಇಳಿದಾಗ ಅವುಗಳ ಬಲಹೀನತೆ ಗೋಚರವಾಗುತ್ತದೆ. ವೈಯಕ್ತಿಕ ಅಗತ್ಯಕ್ಕಾಗಿ ಪಡೆದ ಸಾಲದ ಮೇಲಂತೂ ಬಡ್ಡಿ ವಿಧಿಸುವುದಕ್ಕೆ ಯಾವುದೇ ಬೌದ್ಧಿಕ ಔಚಿತ್ಯವೂ ಇಲ್ಲ. ಬಡ್ಡಿಯ ಸಮರ್ಥಕರು ಕೂಡಾ ಈ ದುರ್ಬಲ ವ್ಯಾಜ್ಯವನ್ನು ಕೈ ಬಿಟ್ಟಿದ್ದಾರೆ. ಇನ್ನು ವ್ಯಾಪಾರಕ್ಕಾಗಿ ಪಡೆಯುವ ಸಾಲದ ವಿಷಯ. ಈ ಬಗ್ಗೆ ಬಡ್ಡಿಯ ಸಮರ್ಥನೆಗೆ ಎದುರಾಗುವ ಅತ್ಯಂತ ಜಟಿಲ ಪ್ರಶ್ನೆ ಬಡ್ಡಿ ಯಾವುದರ ಬೆಲೆ ಎಂಬುದಾಗಿದೆ. ಒಬ್ಬ ಸಾಲ ನೀಡುವವನು ಸಾಲಗಾರನಿಗೆ ನೀಡುವ ಯಾವ ಗಣನೀಯ ವಸ್ತುವಿನ ಮೌಲ್ಯವನ್ನು ಅವನು ಪ್ರತಿ ತಿಂಗಳು, ಪ್ರತಿ ವರ್ಷ ಪಡೆಯಲು ಅರ್ಹನಾಗುತ್ತಾನೆ? ಆ ವಸ್ತುವನ್ನು ನಿರ್ಧರಿಸುವಲ್ಲಿ ಬಡ್ಡಿಯ ಸಮರ್ಥಕರು ಬಹಳ ಪೇಚಿನಲ್ಲಿ ಸಿಲುಕುತ್ತಾರೆ.

ಒಂದು ವರ್ಗ, ಆ ವಸ್ತು 'ಪ್ರಯೋಜನ ಪಡೆಯುವ ಅವಕಾಶವಾಗಿದೆ' ಎನ್ನುತ್ತದೆ. ಆದರೆ ಮೇಲಿನ ಚರ್ಚೆಯಿಂದ ವ್ಯಕ್ತವಾಗಿರುವಂತೆ ಈ ಅವಕಾಶವು ಖಚಿತ ಮತ್ತು ನಿತ್ಯ

1. ಇಲ್ಲಿ ಒಬ್ಬನು 'ನೀವು ಜಮೀನಿನ ಗೇಣಿ ಹೇಗೆ ವಸೂಲಿ ಮಾಡುತ್ತೀರಿ? ಅದು ಕೂಡಾ ಬಡ್ಡಿಯಂತೆಯೇ ಅಲ್ಲವೇ?' ಎಂದು ಪ್ರಶ್ನಿಸಬಹುದು. ಆದರೆ ಈ ಆಕ್ಷೇಪ, ಗೇಣಿಗೆ ಅನ್ವಯವಾಗುವುದು ಜಮೀನಿಗೆ ನಗದು ದರದಲ್ಲಿ- ಉದಾ: ಎಕ್ರೆಗೆ ರೂ. 500ರಂತೆ, ಮುಂಗಡ ಗೇಣಿ ಪಡೆಯುವುದು ಧರ್ಮಸಮ್ಮತವೆನ್ನುವವರಿಗೆ ಮಾತ್ರ. ನಾನು ಅದನ್ನು ಧರ್ಮಸಮ್ಮತವೆಂದು ಪರಿಗಣಿಸುವುದಿಲ್ಲ. ನಾನು ಅದನ್ನು ಬಡ್ಡಿಯ ಒಂದು ರೂಪವೆಂದೇ ಭಾವಿಸುತ್ತೇನೆ. ಆದ್ದರಿಂದ ಈ ಆಕ್ಷೇಪಕ್ಕೆ ಉತ್ತರಿಸುವುದು ನನ್ನ ಹೊಣೆಯಲ್ಲ. ಭೂಮಾಲಕ ಮತ್ತು ಒಕ್ಕಲಿಗನ ಮಧ್ಯೆ ಧರ್ಮಸಮ್ಮತವಾದ ವ್ಯವಹಾರ ಬೆಳೆ ಹಂಚುವ ವ್ಯವಹಾರವಾಗಿದೆ. ಅರ್ಥಾತ್: ಒಟ್ಟು ಬೆಳೆಯ ನಿರ್ದಿಷ್ಟ ಅಂಶವನ್ನು ಭೂಮಾಲಿಕನಿಗೆ ಕೊಡುವುದು. ಇದು ವ್ಯಾಪಾರದಲ್ಲಿ ಪಾಲುದಾರಿಕೆಯಂತೆಯೇ ಇದೆ. ಇದನ್ನು ನಾನು ಧರ್ಮಸಮ್ಮತವೆಂದು ಪರಿಗಣಿಸುತ್ತೇನೆ. ಜಮೀನಿನ ಬಾಡಿಗೆಯು ಯಾವ ರೂಪದಲ್ಲಿ ಧರ್ಮಸಮ್ಮತವಾಗುತ್ತದೆಂಬುದನ್ನು ನಾನು ನನ್ನ "ಮಸ್‌ಅಲಯೆ ಮಿಲ್ಕಿಯತೆ ಝುಮೀನ್" (ಜಮೀನಿನ ಒಡೆತನದ ಸಮಸ್ಯೆ) ಎಂಬ ಪುಸ್ತಕದಲ್ಲಿ ವಿವರಿಸಿದ್ದೇನೆ. ಅದಕ್ಕೆ ಮೇಲಿನ ಆಕ್ಷೇಪವು ಅನ್ವಯವಾಗುವುದಿಲ್ಲ.

ವೃದ್ಧಿಸುವ ಬೆಲೆ ಪಡೆಯುವ ಹಕ್ಕನ್ನು ಅವನಿಗೆ ನೀಡುವುದಿಲ್ಲ. ಬದಲಾಗಿ ಸಾಲ ಪಡೆದವನಿಗೆ ಅದರಿಂದ ಲಾಭವಾದಾಗ ಅದರಿಂದ ಒಂದು ನಿಶ್ಚಿತ ಪಾಲನ್ನು ಪಡೆಯುವ ಹಕ್ಕನ್ನು ಮಾತ್ರ ಅದು ನೀಡುತ್ತದೆ.

ಇನ್ನೊಂದು ವರ್ಗವು ಆ ವಸ್ತು 'ಅವಧಿ' ಎನ್ನುತ್ತದೆ. ಸಾಲ ನೀಡುವವನು ಸಾಲಗಾರನಿಗೆ ಆ ಹಣವನ್ನು ಉಪಯೋಗಿಸಲು ನೀಡುವ ಅವಧಿಯೇ ಇದರ ಉದ್ದೇಶ. ಅವರ ಅಭಿಪ್ರಾಯದಂತೆ ಈ ಅವಧಿಗೆ ತನ್ನದೇ ಆದ ಒಂದು ಬೆಲೆಯಿದೆ. ಆ ಅವಧಿಯು ಹೆಚ್ಚಿದಂತೆಲ್ಲಾ ಅದರ ಬೆಲೆಯೂ ಹೆಚ್ಚಾಗುತ್ತದೆ. ಯಾವ ದಿನ ಸಾಲಗಾರನು ಹಣ ಪಡೆದು ವ್ಯಾಪಾರದಲ್ಲಿ ತೊಡಗಿಸುತ್ತಾನೋ ಅಂದಿನಿಂದ ಆ ಹಣದಿಂದ ಸಿದ್ಧವಾದ ಮಾಲು ಮಾರುಕಟ್ಟೆಗೆ ತಲುಪಿ ವಿಕ್ರಯವಾಗುವ ತನಕ ಒಂದೊಂದು ಕ್ಷಣವೂ ವ್ಯಾಪಾರಿಯ ಮಟ್ಟಿಗೆ ಬೆಲೆ ಬಾಳುವಂತಹದ್ದಾಗಿದೆ. ಈ ಅವಧಿ ಅವನಿಗೆ ಸಿಗದೆ ಮಧ್ಯದಲ್ಲೇ ಹಣವನ್ನು ಹಿಂದಕ್ಕೆ ಪಡೆದರೆ ಅವನ ವ್ಯಾಪಾರವೇ ಸ್ಥಗಿತವಾದೀತು. ಆದ್ದರಿಂದ ಈ ಅವಧಿಗೆ ಖಂಡಿತ ಒಂದು ಮೌಲ್ಯವಿದೆ. ಆದ್ದರಿಂದ ಆ ಹಣವನ್ನು ಒದಗಿಸಿದವನು ಆ ಮೌಲ್ಯದಿಂದ ಪಾಲು ಪಡೆಯಲು ಅರ್ಹನಾಗಿದ್ದಾನೆ. ಈ ಅವಧಿಯು ಹೆಚ್ಚು ಕಡಿಮೆಯಾದರೆ ಲಾಭದ ಸಾಧ್ಯತೆಯಲ್ಲೂ ಹೆಚ್ಚು ಕಡಿಮೆಯಾಗುತ್ತದೆ. ಆದ್ದರಿಂದ ಸಾಲ ನೀಡುವವನು ಆ ಅವಧಿಯ ಪ್ರಮಾಣದಲ್ಲೇ ಅದರ ಮೌಲ್ಯವನ್ನು ನಿರ್ಧರಿಸಲು ಹಕ್ಕುಳ್ಳವನಾಗುತ್ತಾನೆ.

ಆದರೆ ಇಲ್ಲಿ ಮತ್ತೆ ಅದೇ ಪ್ರಶ್ನೆ ಉದ್ಭವಿಸುತ್ತದೆ. ಸಾಲಗಾರನು ಪಡೆದ ಹಣದಿಂದ ಖಂಡಿತ ಲಾಭ ಗಳಿಸುತ್ತಾನೆ. ಅವನಿಗೆ ನಷ್ಟವಾಗಲಿಕ್ಕಿಲ್ಲ ಎಂದು ಸಾಲ ನೀಡುವವನಿಗೆ ಖಾತ್ರಿಯಾಗುವುದು ಹೇಗೆ? ಅದರ ಲಾಭವು ಇಂತಿಷ್ಟೇ ಶೇಕಡಾ ಆಗಿರುವುದು. ಆದ್ದರಿಂದ ಇಂತಿಷ್ಟು ಶೇಕಡಾ ಅವನು ಸಾಲ ನೀಡಿದವನಿಗೆ ಪಾವತಿಸಬೇಕೆಂದು ಮೊದಲೇ ನಿರ್ಧರಿಸುವುದು ಹೇಗೆ? ಅವನು ಆ ಹಣವನ್ನು ಉಪಯೋಗಿಸಲು ಸಾಲಗಾರನಿಗೆ ನೀಡಿದ ಅವಧಿಯಲ್ಲಿ ಪ್ರತಿ ತಿಂಗಳು ಮತ್ತು ಪ್ರತಿವರ್ಷ ಇಂತಿಷ್ಟೇ ಲಾಭ ಅವನಿಗೆ ಸಿಗುತ್ತದೆ, ಆದ್ದರಿಂದ ಸಾಲ ನೀಡಿದವನಿಗೆ ಇಂತಿಷ್ಟೇ ಮಾಸಿಕ ಅಥವಾ ವಾರ್ಷಿಕ ದರದಲ್ಲಿ ಅವನ ಪಾಲು ನೀಡಬೇಕು ಎಂದು ನಿರ್ಧರಿಸುವುದು ಹೇಗೆ? ಈ ಪ್ರಶ್ನೆಗಳಿಗೆ ಯಾವುದೇ ಸಮರ್ಪಕವಾದ ಉತ್ತರ ಬಡ್ಡಿಯ ಸಮರ್ಥಕರ ಬಳಿಯಿಲ್ಲ. ಆದ್ದರಿಂದ ನಾವು ಅದೇ ಅಂಗೀಕೃತ ತತ್ವದ ಕಡೆಗೆ ಮರಳಬೇಕಾಗುತ್ತದೆ. ಅದೆಂದರೆ ಲಾಭ-ನಷ್ಟಗಳಲ್ಲಿ ಪಾಲುದಾರಿಕೆ ಮತ್ತು ನಿರ್ದಿಷ್ಟ ಪ್ರಮಾಣದ ಪಾಲುದಾರಿಕೆ ಮಾತ್ರ ವ್ಯಾಪಾರ-ವ್ಯವಹಾರಗಳಲ್ಲಿ ಹಣ ತೊಡಗಿಸಿ ಲಾಭ ಪಡೆಯುವ ಸರಿಯಾದ ಕ್ರಮ.

## ತೃತೀಯ ಸಮರ್ಥನೆ

ಲಾಭ ಗಳಿಸುವುದೇ ಬಂಡವಾಳದ ಗುಣವಾಗಿದೆ. ಆದ್ದರಿಂದ ಒಬ್ಬನಿಗೆ ಬಂಡವಾಳ ಒದಗಿಸಿದವನು ಬಡ್ಡಿ ಪಡೆಯುವ ಹಕ್ಕು ಹೊಂದಿರುತ್ತಾನೆ. ಬಂಡವಾಳ ಪಡೆದವನು ಬಡ್ಡಿ

ನೀಡುವುದು ಅವನ ಕರ್ತವ್ಯವಾಗಿದೆ ಎಂಬುದು ಒಂದು ವರ್ಗದ ವಾದವಾಗಿದೆ. ಆವಶ್ಯಕ ವಸ್ತುಗಳ ಉತ್ಪಾದನೆ ಮತ್ತು ವಿತರಣೆಯಲ್ಲಿ ನೆರವಾಗುವ ಸಾಮರ್ಥ್ಯ ಬಂಡವಾಳಕ್ಕೆ ಇದೆ. ಬಂಡವಾಳದ ನೆರವಿನಿಂದ ಆಗುವಷ್ಟು ವಸ್ತುಗಳ ಉತ್ಪಾದನೆ ಅದರ ನೆರವಿಲ್ಲದೆ ಆಗಲಾರದು. ಬಂಡವಾಳದ ನೆರವು ಇರುವುದರಿಂದ ಹೆಚ್ಚಿನ ಪ್ರಮಾಣದಲ್ಲಿ ಉತ್ತಮ ಸರಕು ಉತ್ಪಾದನೆಯಾಗುತ್ತದೆ ಮತ್ತು ಹೆಚ್ಚು ಬೆಲೆ ಸಿಗುವ ಮಾರುಕಟ್ಟೆಯನ್ನು ಅದು ತಲಪುತ್ತದೆ. ಅನ್ಯಥಾ ಕಡಿಮೆ ಪ್ರಮಾಣದಲ್ಲಿ ಉತ್ತಮವಲ್ಲದ ಸರಕು ಉತ್ಪಾದನೆಯಾಗಿ ಹೆಚ್ಚು ಬೆಲೆ ಸಿಗದ ಮಾರುಕಟ್ಟೆಗೆ ತಲಪುತ್ತದೆ. ಲಾಭ ಗಳಿಸುವ ಗುಣ ಬಂಡವಾಳದಲ್ಲಿ ನಿಕ್ಷಿಪ್ತವಾಗಿದೆ ಎಂಬುದಕ್ಕೆ ಇದೊಂದು ಪುರಾವೆಯಾಗಿದೆ. ಆದ್ದರಿಂದ ಅದರ ಉಪಯೋಗವೇ ಬಡ್ಡಿಯ ಹಕ್ಕನ್ನು ಉಂಟು ಮಾಡುತ್ತದೆ.

ಆದರೆ ಬಂಡವಾಳಕ್ಕೆ ಲಾಭ ಗಳಿಸುವ ಖಾಸಾ ಗುಣವಿದೆಯೆಂಬ ವಾದವೇ ತಪ್ಪಾಗಿದೆ. ಬಂಡವಾಳವನ್ನು ಯಾರಾದರೂ ಪಡೆದು ಲಾಭದಾಯಕ ಕಾರ್ಯದಲ್ಲಿ ತೊಡಗಿಸಿದಾಗ ಮಾತ್ರ ಅದರಲ್ಲಿ ಈ ಗುಣವು ಉಂಟಾಗುತ್ತದೆ. ಈ ಸಂದರ್ಭದಲ್ಲಿ ಮಾತ್ರ ಹಣ ಪಡೆದವನು ಅದನ್ನು ಲಾಭದಾಯಕ ಕಾರ್ಯದಲ್ಲಿ ತೊಡಗಿಸಿರುವುದರಿಂದ ಬಂಡವಾಳ ಹೂಡಿದವನಿಗೆ ಲಾಭದ ಪಾಲು ಸಿಗಬೇಕೆಂದು ಹೇಳಬಹುದಾಗಿದೆ. ಆದರೆ ಕಾಯಿಲೆಗೆ ಮದ್ದು ಮಾಡಲು ಅದನ್ನು ವ್ಯಯಿಸಿದರೆ, ಅಥವಾ ಮೃತನ ಶವ ಸಂಸ್ಕಾರಕ್ಕಾಗಿ ಸಾಲ ಪಡೆದಿದ್ದರೆ ಆ ಹಣ ಎಲ್ಲಿಂದ ಆರ್ಥಿಕ ಮೌಲ್ಯವನ್ನುಂಟು ಮಾಡುತ್ತದೆ? ಆದ್ದರಿಂದ ಸಾಲ ನೀಡುವವನಿಗೆ ಯಾವುದರ ಪಾಲಿನ ಹಕ್ಕು ಬರುತ್ತದೆ?

ಇನ್ನು ಲಾಭದಾಯಕ ಕಾರ್ಯಗಳಲ್ಲಿ ತೊಡಗಿಸಿದ ಬಂಡವಾಳವು ಕೂಡಾ ಖಚಿತ ಲಾಭವನ್ನೇ ನೀಡುವುದಿಲ್ಲ. ಆದ್ದರಿಂದ ಲಾಭ ಗಳಿಕೆಯು ಬಂಡವಾಳದ ಖಾಸಾ ಗುಣವಾಗಿದೆ ಎನ್ನುವಂತಿಲ್ಲ. ಹಲವೊಮ್ಮೆ ಯಾವುದಾದರೂ ಕಾರ್ಯದಲ್ಲಿ ಹೆಚ್ಚಿನ ಬಂಡವಾಳವನ್ನು ತೊಡಗಿಸಿದರೆ ಅದರಿಂದ ಲಾಭ ಹೆಚ್ಚುವ ಬದಲು ಕಡಿಮೆಯಾಗುತ್ತದೆ. ಎಲ್ಲಿಯ ವರೆಗೆಂದರೆ ಕೆಲವೊಮ್ಮೆ ನಷ್ಟವೂ ಸಂಭವಿಸುತ್ತದೆ. ಇಂದು ವ್ಯಾಪಾರ ಜಗತ್ತಿನಲ್ಲಿ ಆಗಾಗ ಕಾಣಿಸಿ ಕೊಳ್ಳುವ ಬಿಕ್ಕಟ್ಟಿನ ಸ್ಥಿತಿ(Crisis)ಗೆ ಕಾರಣ- ಅಗತ್ಯಕ್ಕಿಂತ ಹೆಚ್ಚಿನ ಬಂಡವಾಳವು ವಾಣಿಜ್ಯ ಕ್ಷೇತ್ರಕ್ಕೆ ಹರಿಯುವುದಾಗಿದೆ. ಇದರಿಂದ ಉತ್ಪಾದನೆಯು ಬೇಡಿಕೆಗಿಂತ ಹೆಚ್ಚಾಗಿ ಬೆಲೆಗಳು ಇಳಿಮುಖವಾಗುತ್ತವೆ. ಹಣದುಬ್ಬರದ ಜತೆಗೆ ಬೆಲೆ ಕುಸಿತವು ಯಾವ ಮಟ್ಟಕ್ಕೆ ಇಳಿಯುತ್ತದೆಂದರೆ ಬಂಡವಾಳ ಹೂಡಿಕೆಯಿಂದ ಯಾವುದೇ ಲಾಭದ ನಿರೀಕ್ಷೆ ಉಳಿದಿರುವುದಿಲ್ಲ.

ಒಂದು ವೇಳೆ ಬಂಡವಾಳದಲ್ಲಿ ಲಾಭ ಗಳಿಕೆಯ ಗುಣ ಇದ್ದರೂ ಕೂಡಾ ಆ ಗುಣವು ಕಾರ್ಯರೂಪಕ್ಕೆ ಬರಬೇಕಾದರೆ ಅದು ಇತರ ಅನೇಕ ವಿಷಯಗಳನ್ನು ಅವಲಂಬಿಸಿರುತ್ತದೆ. ಉದಾ: ಅದನ್ನು ಉಪಯೋಗಿಸುವವರ ಶ್ರಮ, ಸಾಮರ್ಥ್ಯ, ಬುದ್ಧಿವಂತಿಕೆ, ಅನುಭವ ಮತ್ತು

ಅಂದಿನ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಸ್ಥಿತಿಯು ಅನುಕೂಲವಾಗಿರುವುದು, ಪ್ರಾಕೃತಿಕ ಅಪಾಯಗಳಿಂದ ಸುರಕ್ಷಿತತೆ ಇತ್ಯಾದಿ ಅನೇಕಾನೇಕ ವಿಷಯಗಳು ಅದರ ಲಾಭ ಗಳಿಕೆಗೆ ಅನಿವಾರ್ಯ ನಿಬಂಧನೆಗಳಾಗಿವೆ. ಇವುಗಳ ಪೈಕಿ ಒಂದು ಕೂಡಾ ಪೂರ್ತಿಯಾಗದಿದ್ದರೆ ಹೆಚ್ಚಿನ ವೇಳೆ ಬಂಡವಾಳದ ಲಾಭ ಗಳಿಕೆಯ ಗುಣವೇ ಅಳಿದು ಹೋಗುತ್ತದೆ. ಮಾತ್ರವಲ್ಲ ಅದು ನಷ್ಟವಾಗಿ ಪರಿಣಮಿಸುತ್ತದೆ. ಆದರೆ ಬಡ್ಡಿಯ ಮೇಲೆ ಸಾಲ ನೀಡುವವನು ಈ ನಿಬಂಧನೆಗಳನ್ನು ಪೂರೈಸುವ ಹೊಣೆ ವಹಿಸುವುದಿಲ್ಲ. ಅಂತೆಯೇ ಆ ಪೈಕಿ ಯಾವುದಾದರೂ ನಿಬಂಧನೆ ಪೂರ್ಣಗೊಳ್ಳದಿದ್ದುದರಿಂದ ಅವನ ಬಂಡವಾಳ ಲಾಭ ಗಳಿಸದಿದ್ದರೆ ತಾನು ಬಡ್ಡಿ ಪಡೆಯಲಾರೆ ಎಂದು ಕೂಡಾ ಒಪ್ಪಿಕೊಳ್ಳುವುದಿಲ್ಲ. ಅವನಂತೂ ತನ್ನ ಬಂಡವಾಳವು ಒಂದು ನಿಶ್ಚಿತ ದರದಲ್ಲಿ ಬಡ್ಡಿ ಪಡೆಯುವ ಅರ್ಹತೆಯನ್ನು ಹೊಂದಿದೆ ಎಂದೇ ವಾದಿಸುತ್ತಾನೆ. ಅದರಿಂದ ಲಾಭವಾಗಲಿ ಆಗದಿರಲಿ ಅವನಿಗೆ ಅದರ ಪರಿವೆಯಿರುವುದಿಲ್ಲ.

ಕಟ್ಟಕಡೆಯ ಸಂಭಾವ್ಯತೆ ಎಂಬ ನೆಲೆಯಲ್ಲಿ ಬಂಡವಾಳವು ಲಾಭ ಗಳಿಕೆಯ ಖಾಸಾ ಗುಣವನ್ನು ಹೊಂದಿದೆ ಎಂಬ ವಾದವನ್ನು ಒಪ್ಪಿಕೊಂಡರೂ ಅದರಿಂದ ಬಂಡವಾಳ ಹೂಡಿದವನಿಗೆ ಆ ಲಾಭದಲ್ಲಿ ಪಾಲು ಪಡೆಯುವ ಹಕ್ಕಿದೆ ಎಂಬುದನ್ನು ಅಂಗೀಕರಿಸಿದರೂ ಆ ಲಾಭವು ಇಂತಿಷ್ಟೇ ಶೇಕಡಾ ಆಗಿರುವುದೆಂದು ನಿರ್ಧರಿಸುವುದು ಹೇಗೆ? ಒಂದು ವೇಳೆ ಪ್ರಸಕ್ತ ಲಾಭ ಗಳಿಕೆಯ ಪ್ರಮಾಣವನ್ನು ಯಾವುದಾದರೂ ಊಹೆಯ ಲೆಕ್ಕಾಚಾರದಿಂದ ನಿರ್ದಿಷ್ಟ ಪಡಿಸಿದರೆ ಕೂಡಾ ಒಂದು ಸಂಸ್ಥೆಗೆ 10 ವರ್ಷದ ಅವಧಿಗೆ ಮತ್ತೊಂದು ಸಂಸ್ಥೆಗೆ 20 ವರ್ಷದ ಅವಧಿಗೆ ನೀಡುವ ಸಾಲಕ್ಕೆ ಬಡ್ಡಿ ದರವನ್ನು ಈಗಲೇ ನಿಶ್ಚಯಿಸುವುದು ಹೇಗೆ? ಮುಂದಿನ ಹತ್ತಿಪ್ಪತ್ತು ವರ್ಷಗಳಲ್ಲಿ ಬಂಡವಾಳದ ಲಾಭ ಗಳಿಕೆಯ ದರವು ಇಂದಿನ ಮಟ್ಟದಲ್ಲೇ ಇರುವುದೆಂಬುದಕ್ಕೆ ಖಾತರಿ ಏನಿದೆ? ಒಂದು ವೇಳೆ ಹತ್ತು ವರ್ಷದ ನಂತರ ಬಡ್ಡಿ ದರವು ಈಗಿನದಕ್ಕಿಂತ ಭಿನ್ನವಾಗಿದ್ದರೆ? ಇಪ್ಪತ್ತು ವರ್ಷಗಳ ನಂತರ ಅದು ಇನ್ನಷ್ಟು ಭಿನ್ನವಾಗಿದ್ದರೆ? ಆಗ ಯಾವ ಆಧಾರದ ಮೇಲೆ ಒಂದು ಸಂಸ್ಥೆಯಿಂದ ಹತ್ತು ವರ್ಷಗಳ ತನಕ ಮತ್ತು ಇನ್ನೊಂದು ಸಂಸ್ಥೆಯಿಂದ ಇಪ್ಪತ್ತು ವರ್ಷಗಳ ತನಕ ಈಗಿನ ದರದ ಮೇಲೆ ಆ ಬಂಡವಾಳದ ಲಾಭ ಗಳಿಕೆಯ ಪಾಲನ್ನು ನಿರ್ಧರಿಸಲಾಗುವುದು? ಇದು ಯಾವ ರೀತಿಯಿಂದಾದರೂ ನ್ಯಾಯಸಮ್ಮತವೆನಿಸುವುದೇ?

## ನಾಲ್ಕನೆಯ ಸಮರ್ಥನೆ

ನಾಲ್ಕನೆಯ ಸಮರ್ಥನೆಗಾಗಿ ಬುದ್ಧಿಯನ್ನು ಸ್ವಲ್ಪ ಹೆಚ್ಚೇ ಉಪಯೋಗಿಸಲಾಗಿದೆ. ಅದು ಈ ರೀತಿಯಿದೆ:

ಮನುಷ್ಯನು ಸಹಜವಾಗಿ ಸದ್ಯದ ಲಾಭ, ಸುಖ-ಸಂತೋಷ ಮತ್ತು ಆರಾಮಗಳಿಗೆ ಭವಿಷ್ಯದ ಲಾಭ ಮತ್ತು ಸುಖಗಳಿಗಿಂತ ಹೆಚ್ಚು ಆದ್ಯತೆ ನೀಡುತ್ತಾನೆ. ಭವಿಷ್ಯವು ಎಷ್ಟು ದೂರವಾಗಿದೆಯೋ ಅದರ ಲಾಭ ಮತ್ತು ಸುಖಗಳು ಅಷ್ಟೇ ಸಂದೇಹಾಸ್ಪದವಾಗಿರುತ್ತವೆ.

ಅದೇ ಅನುಪಾತದಲ್ಲಿ ಮನುಷ್ಯನ ದೃಷ್ಟಿಯಲ್ಲಿ ಅವುಗಳ ಬೆಲೆಯೂ ಕಡಿಮೆಯಾಗುತ್ತಿರುತ್ತದೆ. ಈ ರೀತಿ ಇದ್ದುದನ್ನು ಪ್ರೀತಿಸಲು ಮತ್ತು ಭವಿಷ್ಯದ ಬಗ್ಗೆ ಸಂದೇಹ ಪಡಲು ಅನೇಕ ಕಾರಣಗಳಿವೆ. ಉದಾ:

1. ಭವಿಷ್ಯವು ಅಂಧಕಾರದಲ್ಲಿದೆ. ಜೀವನವು ಅನಿಶ್ಚಿತವಾಗಿದೆ. ಅದರ ಲಾಭಗಳು ಸಂದೇಹಾಸ್ಪದವಾಗಿವೆ. ಆದ್ದರಿಂದ ಅವುಗಳ ಯಾವುದೇ ಸ್ಪಷ್ಟ ಚಿತ್ರಣವು ಮನುಷ್ಯನ ಕಲ್ಪನೆಯಲ್ಲಿಲ್ಲ. ಇದಕ್ಕೆ ವಿರುದ್ಧವಾಗಿ ಇಂದು ಸಿಗುವ ನಗದು ಲಾಭವು ನಿಶ್ಚಿತವಾಗಿದ್ದು ಮನುಷ್ಯನು ಅದನ್ನು ಕಣ್ಣ ಮುಂದೆ ಕಾಣುತ್ತಿರುವನು.

2. ಒಬ್ಬನಿಗೆ ಈಗ ಒಂದು ಆವಶ್ಯಕತೆಯಿದೆ. ಅವನ ಆವಶ್ಯಕತೆಯು ಈಗ ಪೂರ್ಣಗೊಳ್ಳುವುದು ಅವನ ಪಾಲಿಗೆ ಮುಂದೆ ಯಾವಾಗಲಾದರೂ ಆ ವಸ್ತು ಸಿಗುವುದಕ್ಕಿಂತ ಹೆಚ್ಚು ಬೆಲೆ ಬಾಳುವಂತಹದ್ದಾಗಿದೆ. ಆಗ ಅವನಿಗೆ ಅದರ ಅಗತ್ಯ ಇರಲೂಬಹುದು, ಇಲ್ಲದಿರಲೂ ಬಹುದು.

3. ಈಗ ಸಿಗುವ ಹಣವು ಕಾರ್ಯತಃ ಹೆಚ್ಚು ಉಪಯುಕ್ತ ಮತ್ತು ಹಿತಕರವಾಗಿದೆ. ಆದ್ದರಿಂದ ಅದಕ್ಕೆ ಮುಂದೆ ಎಂದಾದರೂ ಸಿಗಬಹುದಾದ ಹಣಕ್ಕಿಂತ ಹೆಚ್ಚು ಪ್ರಾಶಸ್ತ್ಯ ಇದೆ.

ಈ ಕಾರಣಗಳಿಂದಾಗಿ ಸದ್ಯದ ನಗದು ಲಾಭವು ಭವಿಷ್ಯದ ಸಂಶಯಾಸ್ಪದ ಲಾಭಕ್ಕಿಂತ ಹೆಚ್ಚು ಪ್ರಿಯವಾಗಿದೆ. ಆದ್ದರಿಂದ ಇಂದು ಯಾರಾದರೂ ಸಾಲ ಪಡೆಯುವುದಾದರೆ ಅದು ಖಂಡಿತವಾಗಿಯೂ ಅವನು ನಾಳೆ ಸಾಲ ನೀಡಿದವನಿಗೆ ಮರು ಪಾವತಿ ಮಾಡುವ ಹಣಕ್ಕಿಂತ ಹೆಚ್ಚು ಬೆಲೆ ಬಾಳುವಂತಹದ್ದಾಗಿದೆ. ಸಾಲ ನೀಡುವಾಗ ನೀಡಿದ ಹಣಕ್ಕೆ ಸಾಲ ಸಂದಾಯ ಮಾಡುವಾಗ ಪಾವತಿಸುವ ಹಣವು ಸಮಾನ ಮೌಲ್ಯದ್ದಾಗಬೇಕಾದರೆ ಬಡ್ಡಿಯೆಂಬ ಹೆಚ್ಚುವರಿ ಮೌಲ್ಯವು ಅದಕ್ಕೆ ಸೇರಿರಬೇಕು. ಉದಾ: ಒಬ್ಬನು ಓರ್ವ ಸಾಹುಕಾರನಲ್ಲಿ ರೂ. 100/- ಸಾಲ ಕೇಳುತ್ತಾನೆ. ಸಾಹುಕಾರನು ಹೀಗೆ ಹೇಳುತ್ತಾನೆ; "ಇಂದು ನಾನು ನಿನಗೆ ರೂ. 100/- ನೀಡಬೇಕಾದರೆ ಒಂದು ವರ್ಷದ ನಂತರ ನೀನು ನನಗೆ ರೂ. 110/- ಮರಳಿಸಬೇಕು. ಇಲ್ಲಿ ನಡೆಯುತ್ತಿರುವುದು ಸದ್ಯದ ರೂ. 100/- ಮತ್ತು ಒಂದು ವರ್ಷ ನಂತರದ ರೂ. 110/-ರ ಮಧ್ಯೆ ವಿನಿಮಯವಾಗಿದೆ. ರೂ. 10/- ಸದ್ಯದ ರೂ 100/ - ಮತ್ತು ಭವಿಷ್ಯದ ರೂ. 100/-ರ ಮಧ್ಯೆ ಇರುವ ಮಾನಸಿಕ (ಆರ್ಥಿಕವಲ್ಲ) ಮೌಲ್ಯದ ವ್ಯತ್ಯಾಸಕ್ಕೆ ಸಮಾನವಾಗಿದೆ. ಈ ರೂ. 10/- ಒಂದು ವರ್ಷದ ನಂತರದ ರೂ. 100/ -ರ ಜತೆ ಸೇರುವ ತನಕ ಅದು ಸಾಲ ನೀಡಲ್ಪಟ್ಟ ರೂ.100/-ಕ್ಕೆ ಸಮಾನವಾಗಲಾರದು.

ಈ ಸಮರ್ಥನೆಯನ್ನು ಯಾವ ಚಾಣಾಕ್ಷತನದಿಂದ ಮುಂದಿರಿಸಲಾಗಿದೆಯೋ ಅದನ್ನು ಹೊಗಳಲೇಬೇಕಾಗಿದೆ. ಆದರೆ ಅದರಲ್ಲಿ ಸದ್ಯದ ಮತ್ತು ಭವಿಷ್ಯದ ಮಾನಸಿಕ ಮೌಲ್ಯದಲ್ಲಿ ಹೇಳಲಾಗಿರುವ ವ್ಯತ್ಯಾಸವು ಕೇವಲ ಒಂದು ಮೋಸವಲ್ಲದೆ ಇನ್ನೇನೂ ಅಲ್ಲ.

ನಿಜವಾಗಿಯೂ ಮಾನವ ಪ್ರಕೃತಿ ವರ್ತಮಾನವನ್ನು ಭವಿಷ್ಯಕ್ಕಿಂತ ಹೆಚ್ಚು ಪ್ರಮುಖ ಮತ್ತು ಹೆಚ್ಚು ಬೆಲೆ ಬಾಳುವಂತಹದ್ದೆಂದು ಪರಿಗಣಿಸುತ್ತದೆಯೇ? ಹಾಗಾದರೆ ಹೆಚ್ಚಿನ ಜನರು ತಮ್ಮ ಎಲ್ಲ ಗಳಿಕೆಯನ್ನು ಇಂದೇ ಖರ್ಚು ಮಾಡುವುದು ಸರಿಯಲ್ಲವೆಂದು ಬಗೆದು ಅದರ ಒಂದು ಭಾಗವನ್ನು ಭವಿಷ್ಯಕ್ಕಾಗಿ ಉಳಿತಾಯ ಮಾಡಿಡಲು ಕಾರಣವೇನು? ನಾಳೆಯ ಚಿಂತೆಯಿಲ್ಲದೆ ಇಂದಿನ ಸುಖಕ್ಕಾಗಿಯೇ ತನ್ನೆಲ್ಲಾ ಗಳಿಕೆಯನ್ನು ಖರ್ಚು ಮಾಡಿ ಬಿಡುವವನು ನೂರರಲ್ಲಿ ಒಬ್ಬನೂ ಸಿಗಲಾರನು. ಕನಿಷ್ಠ 99 ಶೇ. ಜನರು ತಮ್ಮ ಇಂದಿನ ಅಗತ್ಯಗಳನ್ನು ಬದಿಗೊತ್ತಿ ನಾಳೆಗಾಗಿ ಒಂದಿಷ್ಟಾದರೂ ಉಳಿತಾಯ ಮಾಡುವವರೇ. ಏಕೆಂದರೆ ಭವಿಷ್ಯದಲ್ಲಿ ಬರಬಹುದಾದ ಅಗತ್ಯಗಳನ್ನು ಮತ್ತು ಅಪಾಯಕಾರಿ ಪರಿಸ್ಥಿತಿಗಳನ್ನು ಊಹಿಸಿ ಅವನು ಇಂದಿನ ದೊಡ್ಡ ಅಗತ್ಯಗಳನ್ನೂ ಮುಂದೂಡಬಲ್ಲನು. ಇಂದು ಮನುಷ್ಯನು ಮಾಡುವ ಎಲ್ಲ ಪರಿಶ್ರಮ ಮತ್ತು ಹೋರಾಟವು ಅವನ ನಾಳೆ ಉತ್ತಮವಾಗಬೇಕೆಂಬ ದೃಷ್ಟಿಯಲ್ಲೇ ಆಗಿರುತ್ತದೆ. ತನ್ನ ಮುಂದಿನ ಜೀವನ ಉತ್ತಮವಾಗಲೆಂದು ಅವನು ಇಂದಿನ ತನ್ನ ಎಲ್ಲ ಶ್ರಮಗಳ ಫಲವನ್ನು ಮುಂದೂಡುತ್ತಾನೆ. ತನ್ನ ಭವಿಷ್ಯವನ್ನು ಹಾಳು ಮಾಡಿಕೊಂಡು ವರ್ತಮಾನವನ್ನು ಸುಖದಾಯಕ ಮಾಡಬಯಸುವ ಯಾವ ಮೂರ್ಖನೂ ನಿಮಗೆ ಸಿಗಲಾರನು. ಅಜ್ಞಾನ ಮತ್ತು ಅವಿವೇಕದಿಂದ ಯಾರಾದರೂ ಹೀಗೆ ಮಾಡಲೂಬಹುದು. ಕ್ಷಣಿಕ ಸುಖದ ಅದಮ್ಯ ಬಯಕೆಯಿಂದ ವಿವಶನಾಗಿ ಯಾರಾದರೂ ಹಾಗೆ ಮಾಡಿದರೆ ಅದು ಒಂದು ಅಪವಾದ. ಆದರೆ ಸಾಮಾನ್ಯವಾಗಿ ಯಾರೂ ಪ್ರಜ್ಞಾಪೂರ್ವಕ ಈ ವರ್ತನೆಯನ್ನು ಸರಿಯೆಂದು ಸಮರ್ಥಿಸಲಾರನು.

ಮನುಷ್ಯನು ವರ್ತಮಾನದ ನೆಮ್ಮದಿಗಾಗಿ ಭವಿಷ್ಯದ ನಷ್ಟವನ್ನು ಸಹಿಸುವುದನ್ನು ಸರಿಯೆಂದು ಪರಿಗಣಿಸುತ್ತಾನೆಂಬ ಈ ವಾದವನ್ನು ತಾತ್ಕಾಲಿಕವಾಗಿ ಸರಿಯೆಂದು ಪರಿಗಣಿಸಿದರೂ ಯಾವ ತರ್ಕದ ಆಧಾರದ ಮೇಲೆ ಈ ವಾದವನ್ನು ಹೂಡಲಾಗಿದೆಯೋ ಅದು ಸರಿ ಎನಿಸುವುದಿಲ್ಲ. ಸಾಲ ಪಡೆಯುವಾಗ ಸಾಲ ಕೊಡುವವನ ಮತ್ತು ಸಾಲಗಾರನ ಮಧ್ಯೆ ಆದ ಒಪ್ಪಂದದ ಮೇರೆಗೆ ವರ್ತಮಾನದ ರೂ. 100/- ಒಂದು ವರ್ಷದ ನಂತರದ ರೂ. 110/-ಕ್ಕೆ ಸಮಾನವಾಗಿದೆ. ಹಾಗಾದರೆ ಒಂದು ವರ್ಷದ ನಂತರ ಸಾಲಗಾರನು ಸಾಲ ಮರುಪಾವತಿ ಮಾಡಲು ಹೊರಟಾಗಿನ ಪರಿಸ್ಥಿತಿ ಏನು? ಆಗ ರೂ. 110/- ಕಳೆದ ವರ್ಷದ ರೂ. 100/-ಕ್ಕೆ ಸಮಾನವಾಯಿತು. ಒಂದು ವೇಳೆ ಅವನು ಆ ವರ್ಷ ಸಾಲ ಮರುಪಾವತಿ ಮಾಡದೆ ಮುಂದಿನ ವರ್ಷ ಮಾಡಿದರೆ ಎರಡು ವರ್ಷ ಹಿಂದಿನ 100/- ರೂಪಾಯಿಯ ಬೆಲೆ ಆಗ ರೂ. 120/- ಆಯಿತು. ವಾಸ್ತವದಲ್ಲಿ ಭೂತಕಾಲ ಮತ್ತು ವರ್ತಮಾನದ ಮಧ್ಯೆ ಮೌಲ್ಯಗಳ ಅನುಪಾತ ಇದುವೇ ಆಗಿದೆಯೇ? ಅದೇ ರೀತಿ ಭೂತಕಾಲವು ಎಷ್ಟೆಷ್ಟು ಹಳತಾಗುತ್ತಾ ಹೋಗುತ್ತದೋ ಅದರ ಮೌಲ್ಯವೂ ವರ್ತಮಾನಕ್ಕೆ ತುಲನೆ ಮಾಡಿದರೆ ಹೆಚ್ಚುತ್ತಲೇ ಹೋಗುತ್ತದೆಯೇ? ನಿಮಗೆ ಒಂದು ದೀರ್ಘ ಅವಧಿಯ ಹಿಂದೆ ಸಿಕ್ಕಿದ್ದ ಹಣ-

ಅದನ್ನು ನೀವು ಎಂದೋ ಖರ್ಚು ಮಾಡಿ ಮರೆತು ಬಿಟ್ಟಿರುವಿರಿ. ನಿಮಗೆ ಕಾಲದ ಪ್ರತಿಯೊಂದು ಕ್ಷಣ ಕಳೆಯುವಾಗಲೂ ಅದು ಪ್ರಸಕ್ತ ಹಣಕ್ಕಿಂತ ಹೆಚ್ಚು ಬೆಲೆ ಬಾಳುತ್ತಾ ಸಾಗುತ್ತದೆಯೇ? ಒಂದು ವೇಳೆ ನೀವು ಒಂದು ನೂರು ರೂಪಾಯಿ ವ್ಯಯ ಮಾಡಿ 50 ವರ್ಷಗಳು ಕಳೆದಿದ್ದರೆ ಅದಕ್ಕೆ ಈಗ 500 ರೂಪಾಯಿ ಬೆಲೆಯಾಗುತ್ತದೆಯೇ?

## ಬಡ್ಡಿ ದರದ ಔಚಿತ್ಯ

ಬಡ್ಡಿಕೋರತನವನ್ನು ಸಮರ್ಥಿಸುವವರು ಅದನ್ನು ಬುದ್ಧಿ ಮತ್ತು ನ್ಯಾಯದ ದೃಷ್ಟಿಯಿಂದ ಒಂದು ಧರ್ಮಸಮ್ಮತ ಮತ್ತು ಉಚಿತ ವಸ್ತುವೆಂದು ಸಮರ್ಥಿಸಲು ಮುಂದಿಡುವ ಒಟ್ಟು ಪುರಾವೆಗಳಿವು. ಈ ಅಪವಿತ್ರ ವಸ್ತುವಿಗೆ ವೈಚಾರಿಕತೆಯೊಂದಿಗೆ ದೂರದ ನಂಟೂ ಇಲ್ಲವೆಂದು ಮೇಲಿನ ವಿಮರ್ಶೆಯಿಂದ ಸಾಬೀತಾಗುತ್ತದೆ. ಬಡ್ಡಿ ಪಡೆಯುವುದಕ್ಕೆ ಮತ್ತು ಕೊಡುವುದಕ್ಕೆ ಯಾವುದೇ ವೈಚಾರಿಕ ಪುರಾವೆಯನ್ನು ಬಲವಾದ ಸಮರ್ಥನೆಯ ಮೂಲಕ ನೀಡಲು ಸಾಧ್ಯವಿಲ್ಲ. ಆದರೆ ಇಷ್ಟೊಂದು ಅವೈಚಾರಿಕವಾದ ವಸ್ತುವನ್ನು ಪಾಶ್ಚಾತ್ಯ ವಿದ್ವಾಂಸರು ಮತ್ತು ಚಿಂತಕರು ಸ್ಪಷ್ಟ ಮತ್ತು ಸರ್ವಸಮ್ಮತವಾದ ಆರ್ಥಿಕ ನಿಯಮಗಳಲ್ಲಿ ಸೇರಿಸಿ ಬಿಟ್ಟಿದ್ದಾರೆಂಬುದು ಸೋಜಿಗದ ವಿಷಯ. ಬಡ್ಡಿಯನ್ನು ಒಂದು ಸರ್ವಸಮ್ಮತ ವಾಸ್ತವಿಕತೆಯೆಂದು ಅಂಗೀಕರಿಸಿ ಕೇವಲ ಬಡ್ಡಿ ದರವು ವೈಚಾರಿಕವಾಗಿರಬೇಕೆಂದು ಅವರು ವಾದಿಸುತ್ತಾರೆ. ಬಡ್ಡಿಯ ವ್ಯವಹಾರವು ಸಮರ್ಥನೀಯವೇ ಅಲ್ಲವೇ ಎಂಬ ಬಗ್ಗೆ ನಿಮಗೆ ಪಾಶ್ಚಾತ್ಯ ಸಾಹಿತ್ಯದಲ್ಲಿ ಏನೂ ಸಿಗಲಾರದು. ಆದರೆ ಬಡ್ಡಿ ದರವು 'ಅತಿರೇಕ' ಮತ್ತು 'ಜಾಸ್ತಿ'ಯಾಗುವುದು ಆಕ್ಷೇಪಾರ್ಹವೆಂದೂ ಇಂತಿಷ್ಟು ಬಡ್ಡಿ ದರವು ಔಚಿತ್ಯಪೂರ್ಣವಾಗಿದೆಯೆಂದೂ ಹೇಳುವ ಅನೇಕ ಚರ್ಚೆಗಳು ಆ ಸಾಹಿತ್ಯದಲ್ಲಿ ನಿಮಗೆ ಸಿಗುವುದು.

ನಿಜವಾಗಿ ಯಾವುದಾದರೂ ಬಡ್ಡಿ ದರವು ಔಚಿತ್ಯಪೂರ್ಣವಾಗುವುದು ಸಾಧ್ಯವೇ? ಒಂದು ವಸ್ತು ಸ್ವಯಂ ಔಚಿತ್ಯಪೂರ್ಣವಲ್ಲದಿರುವಾಗ ಅದರ ದರವನ್ನು ಔಚಿತ್ಯಪೂರ್ಣವೆಂದು ಸಮರ್ಥಿಸಲಾಗದು ಎಂಬ ಪ್ರಶ್ನೆಯನ್ನು ಸದ್ಯಕ್ಕೆ ನಾವು ಒತ್ತಟ್ಟಿಗಿಡೋಣ. ಈಗ ನಮ್ಮ ಮುಂದಿರುವ ಪ್ರಶ್ನೆ ಯಾವ ಬಡ್ಡಿ ದರವನ್ನು ನಾವು ಔಚಿತ್ಯಪೂರ್ಣವೆಂದು ಸಮರ್ಥಿಸಬಹುದೆಂಬುದಾಗಿದೆ. ಒಂದು ಬಡ್ಡಿ ದರವು ನ್ಯಾಯಸಮ್ಮತ ಅಥವಾ ಅನ್ಯಾಯಪೂರ್ಣವೆನಿಸುವುದಕ್ಕೆ ಇರುವ ಮಾನದಂಡವೇನು? ಈಗ ಲೋಕದಲ್ಲಿ ನಡೆಯುವ ಬಡ್ಡಿ ವ್ಯವಹಾರದಲ್ಲಿ ಬಡ್ಡಿ ದರದ ನಿರ್ಣಯವು ಯಾವುದೇ ವೈಚಾರಿಕ ಬುನಾದಿಯಲ್ಲಾಗುತ್ತಿದೆಯೇ?

ಈ ಪ್ರಶ್ನೆಯ ಸಂಶೋಧನೆ ನಡೆಸಿದಾಗ ನಮ್ಮ ಮುಂದೆ ಬರುವ ವಾಸ್ತವಿಕತೆ ಏನೆಂದರೆ 'ಔಚಿತ್ಯಪೂರ್ಣ ಬಡ್ಡಿ ದರ' ಎಂಬ ಒಂದು ವಸ್ತು ಜಗತ್ತಿನಲ್ಲಿ ಎಂದೂ ಅಸ್ತಿತ್ವದಲ್ಲಿರಲಿಲ್ಲ. ವಿಭಿನ್ನ ಬಡ್ಡಿ ದರಗಳನ್ನು ವಿಭಿನ್ನ ಕಾಲಗಳಲ್ಲಿ ಔಚಿತ್ಯಪೂರ್ಣವೆಂದು ಪರಿಗಣಿಸಲಾಗುತ್ತಿತ್ತು. ಆದರೆ ಅನಂತರ ಅದೇ ದರಗಳನ್ನು ಅನ್ಯಾಯಪೂರ್ಣವೆಂದು

ಸಾರಲಾಯಿತು. ಮಾತ್ರವಲ್ಲ ಒಂದೇ ಸಮಯದಲ್ಲಿ ಒಂದು ಕಡೆ ಒಂದು ದರವನ್ನು ಔಚಿತ್ಯಪೂರ್ಣವೆಂದು ಪರಿಗಣಿಸಿದರೆ ಇನ್ನೊಂದು ಕಡೆ ಇನ್ನೊಂದು ದರವನ್ನು ಔಚಿತ್ಯಪೂರ್ಣವೆಂದು ಪರಿಗಣಿಸಲಾಯಿತು. ಪುರಾತನ ಹಿಂದೂ ಯುಗದಲ್ಲಿ ಕೌಟಿಲ್ಯದ ವಿವರಣೆಯಂತೆ 15ರಿಂದ 60ಶೇ. ವಾರ್ಷಿಕ ಬಡ್ಡಿ ದರವನ್ನು ಔಚಿತ್ಯಪೂರ್ಣವೆಂದು ಪರಿಗಣಿಸಲಾಗುತ್ತಿತ್ತು. ಒಂದು ವೇಳೆ ಅಪಾಯ ಹೆಚ್ಚಿದ್ದರೆ ದರವು ಅದಕ್ಕಿಂತ ಹೆಚ್ಚು ಆಗಬಹುದಿತ್ತು. 18ನೆಯ ಶತಮಾನದ ಉತ್ತರಾರ್ಧ ಮತ್ತು 19ನೆಯ ಶತಮಾನದ ಪೂರ್ವಾರ್ಧದಲ್ಲಿ ಭಾರತದ ವಿಭಿನ್ನ ರಾಜ್ಯಗಳು ಒಂದೆಡೆ ಇಲ್ಲಿನ ಸಾಹುಕಾರರ ಜತೆ ಮತ್ತು ಇನ್ನೊಂದೆಡೆ ಈಸ್ಟ್ ಇಂಡಿಯಾ ಕಂಪೆನಿಯ ಸರಕಾರದ ಜತೆ ನಡೆಸುತ್ತಿದ್ದ ಹಣಕಾಸಿನ ವ್ಯವಹಾರಗಳಲ್ಲಿ ಸಾಮಾನ್ಯವಾಗಿ ಶೇ. 48ರ ವಾರ್ಷಿಕ ಬಡ್ಡಿ ದರವು ಜಾರಿಯಲ್ಲಿತ್ತು. 1914-18ರ ಪ್ರಥಮ ಮಹಾಯುದ್ಧದ ವೇಳೆ ಭಾರತ ಸರಕಾರವು $6^1/_2$ ಶೇ. ವಾರ್ಷಿಕ ಬಡ್ಡಿ ದರದ ಮೇಲೆ ಯುದ್ಧ ಸಾಲಗಳನ್ನು ಎತ್ತಿತ್ತು. 1920 ಮತ್ತು 1930ರ ಮಧ್ಯೆ ಸಹಕಾರಿ ಸಂಸ್ಥೆಗಳಲ್ಲಿ 12ರಿಂದ 15ಶೇ. ಬಡ್ಡಿ ದರ ಚಾಲ್ತಿಯಲ್ಲಿತ್ತು. 1930-40ರ ದಶಕದಲ್ಲಿ ದೇಶದ ನ್ಯಾಯಾಲಯಗಳು 9 ಶೇ. ಬಡ್ಡಿ ದರವನ್ನು ಔಚಿತ್ಯಪೂರ್ಣವೆಂದು ವಿಧಿಸಿದ್ದುವು. ದ್ವಿತೀಯ ಮಹಾಯುದ್ಧದ ಕಾಲದಲ್ಲಿ ರಿಸರ್ವ್‌ಬ್ಯಾಂಕ್‌ನ ಡಿಸ್ಕೌಂಟ್ ದರವು 3 ಶೇ. ಆಗಿತ್ತು. ಮಾತ್ರವಲ್ಲ ಯುದ್ಧ ನಡೆಯುತ್ತಿದ್ದಾಗ $2^3/_4$ಶೇ. ದರದಲ್ಲಿಯೂ ಸರಕಾರಕ್ಕೆ ಸಾಲ ಸಿಗುತ್ತಿತ್ತು.

ಇದು ನಮ್ಮ ಉಪ ಭೂಖಂಡದ ಸ್ಥಿತಿಯಾಯಿತು. ಅತ್ತ ಯೂರೋಪನ್ನು ತೆಗೆದು ನೋಡಿದರೆ ಅಲ್ಲಿಯೂ ಇಂತಹುದೇ ಚಿತ್ರ ನಮಗೆ ಕಾಣ ಸಿಗುತ್ತದೆ. 16ನೆಯ ಶತಮಾನದ ಮಧ್ಯ ಭಾಗದಲ್ಲಿ ಇಂಗ್ಲೆಂಡ್‌ನಲ್ಲಿ 10 ಶೇಕಡಾ ಬಡ್ಡಿ ದರವನ್ನು ತೀರಾ ಉಚಿತವೆಂದು ಪರಿಗಣಿಸಲಾಗಿತ್ತು. 1940ರ ವೇಳೆಗೆ ಯೂರೋಪ್‌ನ ಕೆಲವು ಸೆಂಟ್ರಲ್ ಬ್ಯಾಂಕ್‌ಗಳು 8-9 ಶೇ. ದರವನ್ನು ವಿಧಿಸುತ್ತಿದ್ದುವು. ಅಂದಿನ ಐಕ್ಯ ರಾಷ್ಟ್ರ ಸಂಘದ ಮೂಲಕ ಮಂಜೂರಾದ ಸಾಲಗಳಿಗೂ ಇದೇ ದರದಲ್ಲಿ ಬಡ್ಡಿಯನ್ನು ವಿಧಿಸಲಾಗುತ್ತಿತ್ತು. ಆದರೆ ಇಂದು ಯೂರೋಪ್ ಮತ್ತು ಅಮೇರಿಕಾದಲ್ಲಿ ಆ ದರವನ್ನು ಬಡ್ಡಿ ದರವಲ್ಲ, 'ಸುಲಿಗೆ' ಎನ್ನಲಾಗುತ್ತದೆ. ಈಗ ಅಲ್ಲಿ ಪ್ರಚಲಿತವಿರುವ ಬಡ್ಡಿ ದರವು $2^1/_2$ಯಿಂದ 3 ಶೇ. ಆಗಿದೆ. ಶೇಕಡಾ 4 ಅತ್ಯಧಿಕ ದರವೆನಿಸುತ್ತದೆ. ಕೆಲವು ಸಂದರ್ಭಗಳಲ್ಲಿ ಶೇ. $^1/_2$ ಮತ್ತು ಶೇ. $^1/_4$ ಬಡ್ಡಿ ದರದ ಪರಿಸ್ಥಿತಿಯೂ ಒದಗುತ್ತದೆ. ಇನ್ನೊಂದೆಡೆ ಸಾರ್ವಜನಿಕರಿಗೆ ಬಡ್ಡಿಯ ಮೇಲೆ ಸಾಲ ನೀಡುವ ಸಾಹುಕಾರರಿಗೆ ಇಂಗ್ಲೆಂಡ್‌ನಲ್ಲಿ 1927ರ 'ಮನಿ ಲೆಂಡರ್ಸ್ ಏಕ್ಟ್' ಪ್ರಕಾರ ನಿಗದಿಗೊಳಿಸಿರುವ ಬಡ್ಡಿ ದರವು ಶೇ. 48 ಆಗಿದೆ. ಅಮೇರಿಕಾದ ನ್ಯಾಯಾಲಯಗಳು ಬಡ್ಡಿಕೋರ ಸಾಹುಕಾರರಿಗೆ ಸಾಲಗಾರರಿಂದ 30ರಿಂದ 60ಶೇಕಡಾದ ವರೆಗಿನ ವಾರ್ಷಿಕ ದರದಲ್ಲಿ ಬಡ್ಡಿಯನ್ನು ಕೊಡಿಸುತ್ತವೆ. ಈಗ ಹೇಳಿ, ಈ ಪೈಕಿ ಸಹಜವೂ ಉಚಿತವೂ ಆದ ದರ ಯಾವುದು?

ಇನ್ನು ಸ್ವಲ್ಪ ಮುಂದುವರಿದು ವಾಸ್ತವದಲ್ಲಿ ಒಂದು ಬಡ್ಡಿ ದರವು ಉಚಿತ ಮತ್ತು ಸಹಜವೆನಿಸಲು ಸಾಧ್ಯವೇ ಎಂಬುದರ ಅವಲೋಕನ ನಡೆಸೋಣ. ಒಬ್ಬ ವ್ಯಕ್ತಿ ತಾನು ಸಾಲ ಪಡೆದ ಹಣದಿಂದ ಲಾಭದ ಪ್ರಮಾಣವು ನಿಶ್ಚಿತವಾದಾಗ ಮಾತ್ರ ನಿಶ್ಚಿತ ಬಡ್ಡಿ ದರವು ಸಹಜ ಮತ್ತು ಉಚಿತವೆನಿಸೀತು ಎಂದು ನಿಮ್ಮ ವಿವೇಕವೇ ಹೇಳೀತು. ಉದಾಹರಣೆಗೆ ಒಂದು ವೇಳೆ ರೂ.100ನ್ನು ಒಂದು ವರ್ಷ ವ್ಯಾಪಾರದಲ್ಲಿ ತೊಡಗಿಸಿದರೆ ಅದರಿಂದ 25ರೂ. ಲಾಭ ಬರುತ್ತದೆಂದು ಖಚಿತವಾಗಿದ್ದರೆ ಅದರಿಂದ 5ರೂ. ಆ 100ರೂ. ಸಾಲ ನೀಡಿದವನ ಸಹಜ ಹಕ್ಕು ಎನಿಸೀತು. ಆದರೆ ಈ ರೀತಿ ಬಂಡವಾಳದ ಬಳಕೆಯಿಂದ ಬರುವ ಲಾಭವನ್ನು ನಿಗದಿಪಡಿಸಲಾಗಿಲ್ಲ. ಅದು ಸಾಧ್ಯವೂ ಅಲ್ಲ. ಸಾಲ ಪಡೆಯುವವನಿಗೆ ತಾನು ಪಡೆದ ಸಾಲದಿಂದಾಗಿ ಎಷ್ಟು ಲಾಭವಾದೀತೆಂದು ನೋಡಿ ಎಂದೂ ಮಾರುಕಟ್ಟೆಯ ಬಡ್ಡಿ ದರವನ್ನು ನಿರ್ಧರಿಸಲಾಗುವುದಿಲ್ಲ. ಅದರಿಂದ ಅವನಿಗೆ ಲಾಭವಾದೀತೋ ಇಲ್ಲವೋ ಎಂಬುದನ್ನು ಬಡ್ಡಿಯ ದರ ನಿರ್ಣಯದ ವೇಳೆ ಪರಿಗಣಿಸಲಾಗುವುದಿಲ್ಲ. ಸಾಹುಕಾರರು ನೀಡುವ ಸಾಲಗಳ ಬಡ್ಡಿ ದರವು ಸಾಮಾನ್ಯವಾಗಿ ಸಾಲ ಪಡೆಯುವವನ ಸಂಕಷ್ಟದ ತೀವ್ರತೆಯ ಪ್ರಮಾಣದಿಂದ ನಿಗದಿಯಾಗುತ್ತದೆ. ವ್ಯಾಪಾರೀ ಸಾಲದ ಬಡ್ಡಿ ದರವು ಬೇರೆಯೇ ಕೆಲವು ಆಧಾರಗಳ ಮೇಲೆ ಹೆಚ್ಚು ಕಡಿಮೆಯಾಗುತ್ತಿರುತ್ತದೆ. ಅದಕ್ಕೆ ಮನುಷ್ಯನ ಬುದ್ಧಿ ಮತ್ತು ನ್ಯಾಯಪ್ರಜ್ಞೆಯೊಂದಿಗೆ ದೂರದ ನಂಟೂ ಇರುವುದಿಲ್ಲ.

## ಬಡ್ಡಿ ದರದ ಕಾರಣಗಳು

ಸಾಹುಕಾರರ ಬಡ್ಡಿ ವ್ಯಾಪಾರದಲ್ಲಿ ಸಾಮಾನ್ಯವಾಗಿ ಓರ್ವ ಸಾಹುಕಾರ ನೋಡುವುದು ಅವನ ಬಳಿ ಸಾಲ ಕೇಳಲು ಬಂದವನು ಎಷ್ಟು ಬಡವ, ಎಷ್ಟು ಕಷ್ಟದಲ್ಲಿದ್ದಾನೆ ಮತ್ತು ಸಾಲ ಸಿಗದೇ ಹೋದರೆ ಅವನ ಕಷ್ಟಗಳು ಎಷ್ಟು ಹೆಚ್ಚಾಗಬಹುದು ಎಂಬುದಾಗಿದೆ. ಈ ವಿಷಯಗಳನ್ನು ನೋಡಿಯೇ ಅವನು ಆತನಿಂದ ಎಷ್ಟು ಬಡ್ಡಿ ವಸೂಲು ಮಾಡಬೇಕೆಂಬುದನ್ನು ನಿರ್ಧರಿಸುತ್ತಾನೆ. ಅವನು ಅಷ್ಟು ಬಡವನಲ್ಲದಿದ್ದರೆ ಅವನಿಂದ ಕಡಿಮೆ ಬಡ್ಡಿ ದರ ವಸೂಲು ಮಾಡುವನು. ಅವನು ಹೆಚ್ಚು ಕಷ್ಟದಲ್ಲಿಲ್ಲದವನಾಗಿದ್ದು ಸಣ್ಣ ಮೊತ್ತವನ್ನೇ ಸಾಲ ಕೇಳುತ್ತಿದ್ದರೆ ಬಡ್ಡಿಯ ದರವೂ ಕಡಿಮೆಯಾಗಿರುವುದು. ಅದಕ್ಕೆ ವಿರುದ್ಧವಾಗಿ ಅವನ ಸಂಕಷ್ಟ ಎಷ್ಟು ತೀವ್ರವಾಗಿರುವುದೋ, ಅವನು ಎಷ್ಟರ ಮಟ್ಟಿಗೆ ಹಣದ ಅಗತ್ಯ ಉಳ್ಳವನಾಗಿರುವನೋ ಅಷ್ಟೇ ಪ್ರಮಾಣದಲ್ಲಿ ಬಡ್ಡಿ ದರವು ಏರುತ್ತಲೇ ಇರುವುದು. ಎಲ್ಲಿಯ ವರೆಗೆಂದರೆ ಓರ್ವ ಬಡಪಾಯಿಯ ಮಗು ರೋಗದಿಂದ ನರಳಿ ಸಾಯುತ್ತಿದ್ದರೆ 400-500 ಶೇಕಡಾ ದರವೂ ಹೆಚ್ಚೆನಿಸಲಾರದು. 1947ರ ದೇಶ ವಿಭಜನೆಯ ಕರಾಳ ದಿನಗಳಲ್ಲಿ ಅಮೃತಸರದ ರೈಲು ನಿಲ್ದಾಣದಲ್ಲಿ ಓರ್ವ ಸಿಕ್ಖ್ ವ್ಯಾಪಾರಿ ಓರ್ವ ಮುಸ್ಲಿಮನಿಂದ ಒಂದು ಗ್ಲಾಸು ನೀರಿಗೆ 300ರೂ. ವಸೂಲಿ ಮಾಡಿದ್ದನು. ಏಕೆಂದರೆ ಆತನ ಮಗು ದಾಹದಿಂದ ಸಾಯುತ್ತಿತ್ತು. ನಿರಾಶ್ರಿತರ ರೈಲಿನಿಂದ ಯಾವನೇ ಮುಸ್ಲಿಮ್ ಯಾತ್ರಿಕನು ಕೆಳಗಿಳಿದು ನೀರು

ತರುವಂತಿರಲಿಲ್ಲ. ಆದ್ದರಿಂದ ಇಂತಹ ಸಂದಿಗ್ಧ ಪರಿಸ್ಥಿತಿಗಳಲ್ಲಿ 'ಸ್ವಾಭಾವಿಕ' ಬಡ್ಡಿ ದರ ಕೂಡಾ ಅದೇ ಮಾನದಂಡದಂತೆ ನಿಗದಿಯಾಗುತ್ತದೆ.

ಇನ್ನು ಹಣಕಾಸು ಮಾರುಕಟ್ಟೆಯಲ್ಲಿ ಬಡ್ಡಿ ದರವು ಹೇಗೆ ನಿರ್ಣಯಿಸಲ್ಪಡುತ್ತದೆ ಎಂಬುದರ ಕುರಿತು ಹೇಳುವುದಾದರೆ ಅದನ್ನು ನಿಗದಿಪಡಿಸುವ ಮತ್ತು ಅದರ ಏರಿಳಿತವನ್ನು ನಿರ್ಣಯಿಸುವ ಬುನಾದಿಗಳ ಬಗ್ಗೆ ಅರ್ಥಶಾಸ್ತ್ರಜ್ಞರಲ್ಲಿ ಎರಡು ಅಭಿಪ್ರಾಯಗಳಿವೆ:

ಒಂದು ವರ್ಗದ ಅರ್ಥಶಾಸ್ತ್ರಜ್ಞರ ಪ್ರಕಾರ ಅದು ಬೇಡಿಕೆ ಮತ್ತು ಪೂರೈಕೆ (Demand & Supply)ಯನ್ನು ಆಧರಿಸಿದೆ. ಬಂಡವಾಳ ಹೂಡ ಬಯಸುವವರ ಸಂಖ್ಯೆ ಕಡಿಮೆಯಿರುವಾಗ ಮತ್ತು ಸಾಲ ನೀಡಲ್ಪಡುವ ಬಂಡವಾಳವು ಹೆಚ್ಚಾದಾಗ ಬಡ್ಡಿಯ ದರ ಇಳಿಯ ತೊಡಗುತ್ತದೆ. ಹೀಗೆ ಬಡ್ಡಿ ದರ ಇಳಿಯುತ್ತಾ ಹೋದಾಗ ಸಾಲ ಪಡೆದು ಬಂಡವಾಳವನ್ನು ವ್ಯಾಪಾರದಲ್ಲಿ ಹೂಡ ಬಯಸುವವರ ಸಂಖ್ಯೆ ಹೆಚ್ಚುತ್ತದೆ. ಈ ರೀತಿ ಬಂಡವಾಳದ ಬೇಡಿಕೆ ಹೆಚ್ಚಾಗಿ ಸಾಲದ ರೂಪದಲ್ಲಿ ನೀಡಲ್ಪಡುವ ಹಣವು ಕಡಿಮೆಯಾಗುತ್ತದೆ. ಆಗ ಬಡ್ಡಿ ದರವು ಏರುಮುಖವಾಗುತ್ತದೆ. ಕೊನೆಗೆ ಬಡ್ಡಿಯ ದರವು ಗರಿಷ್ಠ ಮಟ್ಟಕ್ಕೆ ಏರಿದಾಗ ಸಾಲದ ಬೇಡಿಕೆಯು ಕಡಿಮೆಯಾಗುತ್ತದೆ.

ಬಂಡವಾಳ ಹೊಂದಿರುವವನು ನೇರವಾಗಿ ಮತ್ತು ಉಚಿತ ರೀತಿಯಲ್ಲಿ ವ್ಯಾಪಾರ ಮಾಡುವವನೊಂದಿಗೆ ಪಾಲುದಾರಿಕೆಯ ಒಪ್ಪಂದ ಮಾಡಿಕೊಳ್ಳುವುದಿಲ್ಲ. ನ್ಯಾಯಯುತವಾಗಿ ಅವನ ನೈಜ ಲಾಭದಲ್ಲಿ ತನ್ನ ಪಾಲನ್ನು ಪಡೆಯಬಯಸುವುದಿಲ್ಲ ಎಂಬುದೇ ಇದರ ಅರ್ಥವಾಗಿದೆ. ಬದಲಾಗಿ ಅವನು ತಾನು ಸಾಲ ನೀಡುವವನಿಗೆ ವ್ಯಾಪಾರದಲ್ಲಿ ಇಂತಿಷ್ಟು ಲಾಭವಾದೀತೆಂದು ಅಂದಾಜು ಮಾಡಿ ತನಗೆ ಇಷ್ಟು ದರದಲ್ಲಿ ಬಡ್ಡಿ ಸಿಗಬೇಕೆಂದು ನಿರ್ಧರಿಸುತ್ತಾನೆ. ಇನ್ನೊಂದೆಡೆ ವ್ಯಾಪಾರಿಯೂ ತಾನು ಸಾಲ ಪಡೆದ ಹಣದಿಂದ ತನಗೆ ಗರಿಷ್ಠ ಇಂತಿಷ್ಟು ಲಾಭ ದೊರೆಯಬಹುದು. ಆದ್ದರಿಂದ ಇಂತಿಷ್ಟು ದರಕ್ಕಿಂತ ಹೆಚ್ಚಿನ ಬಡ್ಡಿಯನ್ನು ತನಗೆ ನೀಡಲು ಸಾಧ್ಯವಿಲ್ಲವೆಂದು ನಿರ್ಧರಿಸುತ್ತಾನೆ. ಇಬ್ಬರೂ ಊಹೆಯ (Speculation) ಆಧಾರದಲ್ಲೇ ವ್ಯವಹರಿಸುತ್ತಾರೆ. ಬಂಡವಾಳ ಸಾಲ ನೀಡುವವನು ಯಾವಾಗಲೂ ವ್ಯಾಪಾರದ ಲಾಭದ ಅತಿಶಯೋಕ್ತ ಲೆಕ್ಕಾಚಾರ ಮಾಡುತ್ತಾನೆ. ವ್ಯಾಪಾರಿಯು ಲಾಭದ ಆಸೆಯ ಜತೆಗೆ ನಷ್ಟದ ಭಯವನ್ನೂ ಮುಂದಿರಿಸುತ್ತಾನೆ. ಈ ರೀತಿ ಇಬ್ಬರ ಮಧ್ಯೆ ಸಹಕಾರದ ಬದಲಾಗಿ ನಿತ್ಯ ಒಂದು ಸಂಘರ್ಷದ ಸ್ಥಿತಿ ಏರ್ಪಡುತ್ತದೆ. ವ್ಯಾಪಾರಿಯು ಲಾಭದ ಆಸೆಯಿಂದ ಸಾಲ ಪಡೆದು ಬಂಡವಾಳ ಹೂಡ ಬಯಸಿದಾಗ ಸಾಲ ನೀಡುವವನು ತನ್ನ ಬಡ್ಡಿ ದರವನ್ನು ಏರಿಸತೊಡಗುತ್ತಾನೆ. ಇನ್ನು ಆ ಬಂಡವಾಳವನ್ನು ಸಾಲದ ರೂಪದಲ್ಲಿ ಪಡೆದು ವ್ಯಾಪಾರದಲ್ಲಿ ತೊಡಗಿಸುವುದು ಲಾಭದಾಯಕವಲ್ಲವೆನಿಸುತ್ತದೆ. ಈ ರೀತಿ ಅಂತಿಮವಾಗಿ ಆ ಹಣವು ವ್ಯಾಪಾರದಲ್ಲಿ ತೊಡಗುವುದೇ ಸ್ಥಗಿತವಾಗುತ್ತದೆ. ಆರ್ಥಿಕ ಪ್ರಗತಿಯ ಗತಿ ಒಮ್ಮೆಗೇ ನಿಂತು ಬಿಡುತ್ತದೆ. ಇಡೀ ವ್ಯಾಪಾರವೇ ಮಂದವಾಗುತ್ತದೆ. ಆಗ ತನ್ನ ವಿನಾಶ ಕಾಲ ಹತ್ತಿರ ಬಂತೆಂದು ಬಂಡವಾಳಿಗನಿಗೆ ಮನವರಿಕೆಯಾಗುತ್ತದೆ. ಆತ ಬಡ್ಡಿ ದರವನ್ನು

ಇಳಿಸುತ್ತಾನೆ. ಮತ್ತೆ ವ್ಯಾಪಾರಿಗಳಲ್ಲಿ ಲಾಭದ ಆಸೆ ಕುದುರುತ್ತದೆ. ವ್ಯಾಪಾರ-ಉದ್ದಿಮೆಗಳಿಗೆ ಬಂಡವಾಳದ ಹರಿವು ಹೆಚ್ಚಾಗುತ್ತದೆ. ಇದರಿಂದ ತಿಳಿಯುವುದೇನೆಂದರೆ ಸರಿಯಾದ ನಿಬಂಧನೆಗಳ ಮೇಲೆ ಬಂಡವಾಳ ಮತ್ತು ವ್ಯಾಪಾರದ ನಡುವೆ ಪಾಲುದಾರಿಕೆಯ ಒಡಂಬಡಿಕೆಯಾಗುತ್ತಿದ್ದರೆ ಜಗತ್ತಿನ ಆರ್ಥಿಕ ವ್ಯವಸ್ಥೆಯು ಒಂದು ಸಂತುಲಿತ ಸ್ಥಿತಿಯಲ್ಲಿ ಸಾಗುತ್ತಿತ್ತು. ಆದರೆ ಕಾನೂನು ಬಂಡವಾಳಿಗನಿಗೆ ಬಡ್ಡಿಯ ಮೇಲೆ ತನ್ನ ಹಣವನ್ನು ಚಲಾಯಿಸುವ ಅನುಮತಿ ನೀಡಿತು. ಇದರಿಂದ ಬಂಡವಾಳ ಮತ್ತು ವ್ಯಾಪಾರದ ಪರಸ್ಪರ ಸಂಬಂಧದಲ್ಲಿ ಜೂಜಾಟದ ಸ್ಫೂರ್ತಿ ಪ್ರವೇಶಿಸಿತು. ಜೂಜಿನ ರೂಪದಲ್ಲೇ ಬಡ್ಡಿ ದರದಲ್ಲಿ ಏರಿಳಿತಗಳಾಗಲು ತೊಡಗಿದುವು. ಇದರಿಂದ ಇಡೀ ಜಗತ್ತಿನ ಆರ್ಥಿಕ ವ್ಯವಸ್ಥೆಯು ಒಂದು ಶಾಶ್ವತ ಅಸಂದಿಗ್ಧತೆಗೆ ಸಿಲುಕಿತು.

ಇನ್ನೊಂದು ವರ್ಗವು ಬಡ್ಡಿ ದರದ ಕುರಿತ ವ್ಯಾಖ್ಯೆಯನ್ನು ಈ ರೀತಿ ಮಾಡುತ್ತದೆ. ಬಂಡವಾಳಿಗನು ತನ್ನಲ್ಲಿರುವ ಹಣವನ್ನು ತಾನೇ ಬಳಸಬೇಕೆಂದು ಬಯಸಿದಾಗ ಅವನು ಬಡ್ಡಿಯ ದರವನ್ನು ಏರಿಸುತ್ತಾನೆ. ಅವನ ಈ ಬಯಕೆಯು ಕಡಿಮೆಯಾದಾಗ ಬಡ್ಡಿಯ ದರವೂ ಕಡಿಮೆಯಾಗುತ್ತದೆ. ಇನ್ನು ಬಂಡವಾಳಿಗನು ನಗದು ರೂಪಾಯಿಯನ್ನು ತನ್ನ ಬಳಿಯೇ ಇರಿಸಲು ಬಯಸುವುದೇಕೆಂಬ ಪ್ರಶ್ನೆಗೆ ಅವರ ಬಳಿ ಇರುವ ಉತ್ತರ, ಅದಕ್ಕೆ ವಿಭಿನ್ನ ಕಾರಣಗಳಿವೆ ಎಂಬುದಾಗಿದೆ. ಸ್ವಲ್ಪ ಹಣ ತನ್ನ ವೈಯಕ್ತಿಕ ಅಥವಾ ವ್ಯಾಪಾರದ ಅಗತ್ಯಗಳಿಗಾಗಿ ಇಡಬೇಕಾಗುತ್ತದೆ. ಅನಿರೀಕ್ಷಿತ ಅಗತ್ಯಗಳು ಮತ್ತು ಪರಿಸ್ಥಿತಿಗಳಿಗಾಗಿ ಸ್ವಲ್ಪ ಹಣ ಕೊಡಬೇಕಾಗುತ್ತದೆ. ಉದಾ: ವೈಯಕ್ತಿಕವಾದ ಅಸಾಮಾನ್ಯ ಖರ್ಚುಗಳ ಸಂದರ್ಭ ಅಥವಾ ಯಾವುದಾದರೂ ಉತ್ತಮ ವಹಿವಾಟಿನ ಸಂದರ್ಭ ಅನಿರೀಕ್ಷಿತವಾಗಿ ಒದಗಿ ಬರುವುದು ಇತ್ಯಾದಿ. ಇವೆರಡು ಕಾರಣಗಳಲ್ಲದೆ ಮೂರನೆಯ ಮತ್ತು ಹೆಚ್ಚು ಮುಖ್ಯವಾದ ಕಾರಣವೇನೆಂದರೆ ಬಂಡವಾಳಿಗನು ಭವಿಷ್ಯದಲ್ಲಾಗಬಹುದಾದ ಬೆಲೆ ಇಳಿಕೆ ಅಥವಾ ಬಡ್ಡಿ ದರ ಏರಿಕೆಯ ವೇಳೆ ಅದರಿಂದ ಲಾಭ ಗಳಿಸಲು ತನ್ನ ಬಳಿ ಸಾಕಷ್ಟು ಹಣ ಇರಬೇಕೆಂದು ಬಯಸುತ್ತಾನೆ. ಈಗ ಏಳುವ ಪ್ರಶ್ನೆ ಏನೆಂದರೆ ಈ ಕಾರಣಗಳಿಂದಾಗಿ ಹಣವನ್ನು ತನ್ನ ಬಳಿಯೇ ಇರಿಸಲು ಬಂಡವಾಳಿಗನು ಬಯಸುವುದಾದರೆ ಅದೇನಾದರೂ ಏರಿಳಿತ ಅನುಭವಿಸುತ್ತದೆಯೇ? ಅದರ ಪ್ರಭಾವದಿಂದ ಬಡ್ಡಿ ದರದಲ್ಲಿ ಯಾಕೆ ಏರಿಳಿತವಾಗಬೇಕು? ಇದಕ್ಕೆ ಉತ್ತರವಾಗಿ ಅವರು ಹೇಳುವ ಮಾತು: ಹೌದು. ವಿಭಿನ್ನ ವೈಯಕ್ತಿಕ, ಸಾಮೂಹಿಕ, ರಾಜಕೀಯ ಮತ್ತು ಆರ್ಥಿಕ ಕಾರಣಗಳಿಂದಾಗಿ ಈ ಬಯಕೆಯು ಹೆಚ್ಚಾಗುತ್ತದೆ. ಆಗ ಬಂಡವಾಳಿಗನು ಬಡ್ಡಿ ದರವನ್ನು ಏರಿಸುತ್ತಾನೆ. ತನ್ಮೂಲಕ ವ್ಯಾಪಾರದ ಕಡೆಗೆ ಬಂಡವಾಳದ ಹರಿವು ಕಡಿಮೆಯಾಗುತ್ತದೆ. ಒಮ್ಮೊಮ್ಮೆ ಈ ಬಯಕೆಯು ಕಡಿಮೆಯಾಗುತ್ತದೆ. ಆಗ ಬಂಡವಾಳಿಗನು ಬಡ್ಡಿ ದರವನ್ನು ಇಳಿಸುತ್ತಾನೆ. ಬಡ್ಡಿ ದರ ಕಡಿಮೆ ಇರುವ ಕಾರಣ ವ್ಯಾಪಾರ ಉದ್ದಿಮೆಗಳಲ್ಲಿ ತೊಡಗಿಸಲು ಜನರು ಹೆಚ್ಚು ಹಣ ಸಾಲ ಪಡೆಯುತ್ತಾರೆ.

ಈ ಸುಂದರ ವ್ಯಾಖ್ಯೆಯ ಹಿಂದೆ ಇಣುಕಿ ನೋಡಿದಾಗ ನಮಗೆ ಕಾಣಸಿಗುವುದೇನು? ವೈಯಕ್ತಿಕ ಅಗತ್ಯಗಳು ಮತ್ತು ಸ್ವಂತ ವ್ಯಾಪಾರಕ್ಕಾಗಿ ಸಾಮಾನ್ಯ ಸ್ಥಿತಿಯಲ್ಲಾಗಲೀ ಅಸಾಮಾನ್ಯ ಸ್ಥಿತಿಯಲ್ಲಾಗಲೀ ಬಂಡವಾಳಿಗನು ಕಾಯ್ದಿರಿಸಬಹುದಾದ ಬಂಡವಾಳವು ಒಟ್ಟು ಬಂಡವಾಳದ 5 ಶೇಕಡಾ ಕೂಡಾ ಇರಲಾರದು. ಆದರೆ ಮೊದಲೆರಡು ಕಾರಣಗಳಿಗೆ ಹೆಚ್ಚಿನ ಮಹತ್ವ ನೀಡುವುದು ಸರಿಯಲ್ಲ. ತನ್ನ 95 ಶೇಕಡಾ ಬಂಡವಾಳವನ್ನು ಅವನು ತಡೆ ಹಿಡಿಯುವುದು ಅಥವಾ ಸಾಲದ ರೂಪದಲ್ಲಿ ಹರಿಸುವುದು ಮೂರನೆಯ ಕಾರಣದಿಂದಾಗಿದೆ. ಇದನ್ನು ವಿಶ್ಲೇಷಿಸಿ ನೋಡಿದಾಗ ಅದರಿಂದ ವ್ಯಕ್ತವಾಗುವ ವಾಸ್ತವಿಕತೆಯೇನೆಂದರೆ ಬಂಡವಾಳಿಗನು ಅತ್ಯಂತ ಸ್ವಾರ್ಥದಿಂದ ಲೋಕದ, ದೇಶದ ಮತ್ತು ತನ್ನ ಜನಾಂಗದ ಸ್ಥಿತಿಗತಿಗಳನ್ನು ಅವಲೋಕಿಸುತ್ತಿರುತ್ತಾನೆ. ಈ ಪರಿಸ್ಥಿತಿಗಳಲ್ಲಿ ಅವನು ಕೆಲವು ಕುರುಹುಗಳನ್ನು ನೋಡುತ್ತಿರುತ್ತಾನೆ. ಅವುಗಳ ಆಧಾರದಲ್ಲಿ ಸಮಾಜದ ಸಂಕಷ್ಟ, ಆಪತ್ತು ಮತ್ತು ದುರಂತಗಳ ದುರ್ಲಾಭ ಪಡೆದು ಅದರ ಸಂಕಷ್ಟಗಳನ್ನು ಹೆಚ್ಚಿಸಿ ತನ್ನ ಸ್ಥಿತಿವಂತಿಕೆಯನ್ನು ಏರಿಸುವ ಹುನ್ನಾರ ಹೂಡುತ್ತಿರುತ್ತಾನೆ. ಆದ್ದರಿಂದ ಸಟ್ಟಾ ವ್ಯಾಪಾರಕ್ಕಾಗಿ ತನ್ನಲ್ಲಿ ಯಾವಾಗಲೂ ಬಂಡವಾಳ ಸಿದ್ಧವಿರಬೇಕೆಂದು ಅವನು ಬಯಸುತ್ತಾನೆ. ಬಡ್ಡಿ ದರವನ್ನು ಏರಿಸಿ ವ್ಯಾಪಾರೋದ್ದಿಮೆಗಳತ್ತ ಬಂಡವಾಳದ ಹರಿವನ್ನು ಒಮ್ಮೆಲೇ ತಡೆ ಹಿಡಿಯುತ್ತಾನೆ. ಸಮಾಜದ ಮೇಲೆ ವ್ಯಾಪಾರ ಮಾಂದ್ಯ (Depression) ಎಂಬ ಮಾರಕ ಪಿಡುಗನ್ನು ಹೇರುತ್ತಾನೆ. ಈ ಮಾರ್ಗದಿಂದ ಅನ್ಯಾಯವಾಗಿ ಗಳಿಸಬಹುದಾದುದನ್ನೆಲ್ಲಾ ಗಳಿಸಿಯಾದ ಮೇಲೆ ಇನ್ನೇನೂ ಗಳಿಸಲು ಬಾಕಿಯಿಲ್ಲ ಎಂಬುದನ್ನು ಖಾತರಿ ಮಾಡಿಕೊಂಡಾಗ ತನಗಾಗಿ ಬಂಡವಾಳವನ್ನು ಕಾಯ್ದಿರಿಸುವ ಈ ಬಯಕೆಯು ಅವನಲ್ಲಿ ಕುಂಠಿತವಾಗುತ್ತದೆ. ಆಗ ವ್ಯಾಪಾರಿಗಳಿಗೆ ಕಡಿಮೆ ಬಡ್ಡಿ ದರದ ಆಮಿಷ ಒಡ್ಡಿ ಅವರು ತನ್ನ ಬಂಡವಾಳವನ್ನು ಅವರ ವ್ಯಾಪಾರಗಳಲ್ಲಿ ಹೂಡಲು ಮುಂದೆ ಬರುವಂತೆ ಆಹ್ವಾನಿಸುತ್ತಾನೆ.

ಆಧುನಿಕ ಅರ್ಥಶಾಸ್ತ್ರಜ್ಞರು ಬಡ್ಡಿ ದರದ ಕಾರಣಗಳ ಕುರಿತು ಹೇಳಿರುವುದು ಇವೆರಡೇ ವಿಷಯಗಳಾಗಿವೆ. ಎರಡೂ ಸರಿಯಾಗಿಯೇ ಇವೆ. ಆದರೆ ಈ ಪೈಕಿ ಯಾವ ಕಾರಣವಾಗಿದ್ದರೂ ಅದರಿಂದ ಒಂದು ನ್ಯಾಯಸಮ್ಮತ ಮತ್ತು ಸಹಜ ಬಡ್ಡಿ ದರ ನಿಗದಿಯಾಗುವುದಾದರೂ ಹೇಗೆ? ಒಂದೋ ನಾವು 'ನ್ಯಾಯ ಮತ್ತು ಸಹಜ'ವೆಂಬ ವ್ಯಾಖ್ಯೆಯನ್ನೇ ಬದಲಿಸಬೇಕಾಗುತ್ತದೆ. ಇಲ್ಲವೇ ಬಡ್ಡಿ ಎಷ್ಟು ಅಸಮರ್ಥನೀಯವೋ ಅದರ ದರ ಕೂಡಾ ಅಷ್ಟೇ ಅಸಮರ್ಥನೀಯ ಕಾರಣಗಳಿಂದ ನಿರ್ಧರಿಸಲ್ಪಟ್ಟು, ಅದರಲ್ಲಿ ಏರಿಳಿತಗಳು ಉಂಟಾಗುತ್ತವೆ ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ.

## ಬಡ್ಡಿಯ ಆರ್ಥಿಕ ಲಾಭ ಮತ್ತು ಅದರ ಅಗತ್ಯ

ತರುವಾಯ ಬಡ್ಡಿಯ ಪರವಾಗಿರುವವರು ಇನ್ನೊಂದು ವಾದ ಹೂಡುತ್ತಾರೆ. ಬಡ್ಡಿಯು ಒಂದು ಆರ್ಥಿಕ ಅಗತ್ಯವಾಗಿದೆ. ಅದರಲ್ಲಿ ಕೆಲವು ಲಾಭಗಳಿವೆ. ಬಡ್ಡಿಯ ಹೊರತು ಆ

ಲಾಭಗಳನ್ನು ಗಳಿಸಲು ಸಾಧ್ಯವಿಲ್ಲ. ಈ ವಾದದ ಸಮರ್ಥನೆಗೆ ಅವರು ನೀಡುವ ಪುರಾವೆಗಳ ಸಾರಾಂಶ ಹೀಗಿದೆ:

1. ಮಾನವನ ಎಲ್ಲ ಆರ್ಥಿಕ ವ್ಯವಹಾರಗಳು ಬಂಡವಾಳದ ಶೇಖರಣೆಯನ್ನು ಅವಲಂಬಿಸಿವೆ. ಜನರು ತಮ್ಮ ಬಯಕೆ-ಬೇಡಿಕೆಗಳಿಗೆ ನಿಯಂತ್ರಣ ಹೇರುವ ತನಕ ಬಂಡವಾಳದ ಶೇಖರಣೆ ಸಾಧ್ಯವಲ್ಲ. ಅವರು ತಮ್ಮೆಲ್ಲ ಗಳಿಕೆಗಳನ್ನು ತಮಗಾಗಿಯೇ ವ್ಯಯಿಸಬಾರದು. ಒಂದಿಷ್ಟಾದರೂ ಅದರಿಂದ ಉಳಿತಾಯ ಮಾಡುತ್ತಿರಬೇಕು. ಬಂಡವಾಳ ಶೇಖರಣೆಗೆ ಇರುವ ಏಕೈಕ ಮಾರ್ಗ ಇದುವೇ ಆಗಿದೆ. ಆದರೆ ಒಬ್ಬನಿಗೆ ತನ್ನ ಉಳಿತಾಯಕ್ಕೆ ಏನಾದರೂ ಪ್ರತಿಫಲ ಸಿಗದೆ ಹೋದರೆ ಅವನು ತನ್ನ ಬಯಕೆ-ಬೇಡಿಕೆಗಳನ್ನು ನಿಯಂತ್ರಿಸಲು, ಮಿತವ್ಯಯ ಪಾಲಿಸಲು, ಆತ್ಮ ನಿಯಂತ್ರಣ ಮಾಡಿ ತ್ಯಾಗ ಮನೋಭಾವ ತೋರಿಸಲು ಅವನನ್ನು ಪ್ರೇರೇಪಿಸುವುದು ಹೇಗೆ? ಬಡ್ಡಿಯೇ ಆ ಪ್ರತಿಫಲ. ಅದರ ನಿರೀಕ್ಷೆಯೇ ಜನರನ್ನು ಉಳಿತಾಯಕ್ಕೆ ಪ್ರೇರೇಪಿಸುತ್ತದೆ. ನೀವು ಅದನ್ನು ನಿಷೇಧಿಸಿದರೆ ಹೆಚ್ಚುವರಿ ಆದಾಯವನ್ನು ಬಂಡವಾಳ ಶೇಖರಣೆಯ ನೈಜ ಮೂಲವಾಗಿರುವ ಉಳಿತಾಯ ಮಾಡುವ ಪರಂಪರೆಯೇ ನಿಂತು ಹೋದೀತು.

2. ಆರ್ಥಿಕ ವ್ಯವಹಾರಗಳಿಗೆ ಬಂಡವಾಳದ ಹರಿವಿನ ಅತ್ಯಂತ ಸುಲಭದ ಉಪಾಯವೆಂದರೆ ಜನರಿಗೆ ತಮ್ಮ ಉಳಿತಾಯದ ಹಣವನ್ನು ಬಡ್ಡಿಗೆ ಕೊಡಲು ಮುಕ್ತ ಅವಕಾಶ ನೀಡುವುದು. ಈ ರೀತಿ ಬಡ್ಡಿಯ ಆಸೆಯೇ ತಮ್ಮ ಉಳಿತಾಯವನ್ನು ವ್ಯರ್ಥವಾಗಿ ಇಟ್ಟು ಬಿಡದೆ ಅದನ್ನು ವ್ಯಾಪಾರಿಗಳಿಗೆ ಒಂದು ನಿಶ್ಚಿತ ಬಡ್ಡಿ ದರದ ಮೇಲೆ ಸಾಲ ಕೊಡಲು ಅವರನ್ನು ಪ್ರೇರೇಪಿಸುತ್ತದೆ. ಈ ದ್ವಾರವನ್ನು ಮುಚ್ಚಿ ಬಿಡುವುದರಿಂದ ಬಂಡವಾಳ ಶೇಖರಣೆಯ ಒಂದು ಮುಖ್ಯ ಪ್ರೇರಣೆ ಇಲ್ಲದಾಗುತ್ತದೆ. ಮಾತ್ರವಲ್ಲ ಒಂದಿಷ್ಟು ಬಂಡವಾಳವು ಶೇಖರಣೆಯಾದರೂ ಅದು ವ್ಯಾಪಾರಿಗಳಿಗೆ ದೊರಕದಿರಬಹುದು.

3. ಬಡ್ಡಿಯು ಬಂಡವಾಳವನ್ನು ಶೇಖರಿಸಿ ಅದನ್ನು ವ್ಯಾಪಾರದ ಕಡೆಗೆ ತರುವುದು ಮಾತ್ರವಲ್ಲ, ಅದು ಬಂಡವಾಳದ ನಿರುಪಯುಕ್ತ ಖರ್ಚನ್ನೂ ತಡೆಯುತ್ತದೆ. ಬಡ್ಡಿ ದರವು ಅತ್ಯುತ್ತಮವಾಗಿ ಈ ಕಾರ್ಯವನ್ನು ತನ್ನಷ್ಟಕ್ಕೇ ನಿರ್ವಹಿಸುತ್ತಿರುತ್ತದೆ. ವ್ಯಾಪಾರದ ವಿವಿಧ ಕ್ಷೇತ್ರಗಳ ಪೈಕಿ ಅತ್ಯಧಿಕ ಲಾಭ ತರುವ ಕ್ಷೇತ್ರಕ್ಕೆ ಬಂಡವಾಳವು ಹರಿಯುತ್ತಿರುವಂತೆ ಬಡ್ಡಿ ದರವು ನೋಡಿಕೊಳ್ಳುತ್ತದೆ. ಇನ್ನಾವ ಉಪಾಯದಿಂದಲೂ ಬಂಡವಾಳವು ಅತ್ಯಧಿಕ ಲಾಭ ತರುವ ಕ್ಷೇತ್ರಕ್ಕೆ ಹರಿದು ಬರುವಂತೆ ಖಚಿತಪಡಿಸಲು ಸಾಧ್ಯವಿಲ್ಲ. ನೀವು ಬಡ್ಡಿಯನ್ನು ನಿಷೇಧಿಸಿದರೆ ಅದರ ಪರಿಣಾಮವಾಗಿ ಜನರು ಬಂಡವಾಳವನ್ನು ಮನಬಂದಂತೆ ಮತ್ತು ಲಾಭ-ನಷ್ಟದ ಪರಿವೆಯಿಲ್ಲದೆ ಎಲ್ಲ ತರದ ವಹಿವಾಟುಗಳಲ್ಲಿ ಬಳಸಲು ಆರಂಭಿಸುವರು.

4. ಸಾಲವು ಮನುಷ್ಯ ಜೀವನದ ಅನಿವಾರ್ಯ ಅಗತ್ಯಗಳಲ್ಲಿ ಒಂದಾಗಿದೆ. ವ್ಯಕ್ತಿಗಳಿಗೆ ತಮ್ಮ ವೈಯಕ್ತಿಕ ವ್ಯವಹಾರಗಳಲ್ಲಿ ಅದರ ಅಗತ್ಯ ಬೀಳುತ್ತದೆ. ವ್ಯಾಪಾರಿಗಳಿಗೆ ಯಾವಾಗಲೂ ಅದರ ಅಗತ್ಯ ಬೀಳುತ್ತಿರುತ್ತದೆ. ಸರಕಾರದ ಕೆಲಸವೂ ಸಾಲವಿಲ್ಲದೆ ನಡೆಯುವುದಿಲ್ಲ. ಇಷ್ಟು

ದೊಡ್ಡ ಪ್ರಮಾಣದಲ್ಲಿ ಸಾಲವನ್ನು ಒದಗಿಸುವುದು ಕೇವಲ ದಾನ-ಧರ್ಮಗಳ ಆಧಾರದಲ್ಲಿ ಸಾಧ್ಯವೇ? ನೀವು ಬಂಡವಾಳ ಹೊಂದಿದವರಿಗೆ ಬಡ್ಡಿಯ ಆಸೆ ತೋರಿಸದಿದ್ದರೆ, ಅವರ ಮೂಲ ಧನವೂ ಬಡ್ಡಿ ಸಮೇತ ಅವರಿಗೆ ಮರು ಪಾವತಿಯಾಗಲಿದೆ ಎಂಬುದನ್ನು ಅವರಿಗೆ ಖಾತ್ರಿಪಡಿಸದಿದ್ದರೆ ಅವರು ಸಾಲ ನೀಡಲು ಮುಂದಾಗಲಾರರು. ಈ ರೀತಿ ಸಾಲ ಒದಗುವುದು ನಿಂತು ಹೋದರೆ ಅದರಿಂದ ಇಡೀ ಆರ್ಥಿಕ ಜೀವನದ ಮೇಲೆ ಅತ್ಯಧಿಕ ದುಷ್ಪರಿಣಾಮಗಳಾಗುವುವು. ಒಬ್ಬ ಬಡ ವ್ಯಕ್ತಿಗೆ ಸಂಕಷ್ಟದ ಸಮಯದಲ್ಲಿ ಸಾಹುಕಾರನಿಂದಾದರೂ ಸಾಲ ಸಿಗುತ್ತದೆ. ಬಡ್ಡಿಯ ಆಸೆ ಇಲ್ಲದೆ ಹೋದರೆ ಅವನ ಶವ ಸಂಸ್ಕಾರವಿಲ್ಲದೆ ಬಿದ್ದರೂ ಯಾರೂ ಆ ಕಡೆಗೆ ತಿರುಗಿ ನೋಡಲಾರರು. ಒಬ್ಬ ವ್ಯಾಪಾರಿಗೆ ತುರ್ತು ಅಗತ್ಯದ ಸಂದರ್ಭಗಳಲ್ಲಿ ಬಡ್ಡಿಯ ಮೇಲೆ ಸಾಲವಂತೂ ತಕ್ಷಣ ಸಿಗುತ್ತದೆ. ಅವನ ಕೆಲಸ ಈಡೇರುತ್ತದೆ. ಬಡ್ಡಿಯ ದ್ವಾರವನ್ನು ಮುಚ್ಚಿ ಬಿಟ್ಟರೆ ಎಷ್ಟೋ ಸಲ ಅವನು ದಿವಾಳಿಯಾಗಬೇಕಾದ ಸಂದರ್ಭ ಬರಬಹುದು. ಸರಕಾರಗಳ ಸ್ಥಿತಿಯೂ ಇದುವೇ ಆಗಿದೆ. ಅವುಗಳ ಅವಶ್ಯಕತೆಯೂ ಬಡ್ಡಿಯ ಸಾಲದಿಂದಲೇ ಪೂರ್ತಿಯಾಗುತ್ತದೆ ಅನ್ಯಥಾ ಕೋಟಿಗಟ್ಟಲೆ ರೂಪಾಯಿಯ ಯೋಜನೆಗಳಿಗೆ ಬಂಡವಾಳವನ್ನು ಪುಕ್ಕಟೆಯಾಗಿ ಒದಗಿಸುವ ದಾನಶೂರರನ್ನು ದಿನನಿತ್ಯ ಎಲ್ಲಿಂದ ಹುಡುಕಿ ತರುವುದು?

## ಬಡ್ಡಿಯು ನಿಜವಾಗಿ ಅಗತ್ಯವೂ ಉಪಯುಕ್ತವೂ ಆಗಿದೆಯೇ?

ಇನ್ನು ನಾವು ಈ ಪೈಕಿ ಒಂದೊಂದು 'ಲಾಭ' ಮತ್ತು 'ಅಗತ್ಯ'ಗಳ ಸಮೀಕ್ಷೆ ನಡೆಸೋಣ. ನಿಜವಾಗಿಯೂ ಅವು ಲಾಭ ಮತ್ತು ಅಗತ್ಯಗಳಾಗಿವೆಯೇ ಅಥವಾ ಅದೊಂದು ಪೈಶಾಚಿಕ ಭ್ರಮೆಯೇ?

ಜನರು ಮಿತವ್ಯಯ ಮತ್ತು ಉಳಿತಾಯವನ್ನು ಆರ್ಥಿಕ ಜೀವನಕ್ಕೆ ಒಂದು ಅಗತ್ಯ ಮತ್ತು ಉಪಯುಕ್ತ ವಿಷಯವೆಂದು ತಿಳಿಯುವುದೇ ಪ್ರಥಮ ತಪ್ಪುಕಲ್ಪನೆಯಾಗಿದೆ. ನಿಜವಾಗಿ ವಸ್ತುಸ್ಥಿತಿಯು ಇದಕ್ಕೆ ತದ್ವಿರುದ್ಧವಾಗಿದೆ. ಆರ್ಥಿಕ ಪ್ರಗತಿ ಮತ್ತು ಸುಭಿಕ್ಷೆ ನೆಲೆಸಬೇಕಾದರೆ ರಾಷ್ಟ್ರವು ಒಟ್ಟಾಗಿ ಎಷ್ಟು ಜೀವನಾವಶ್ಯಕ ವಸ್ತುಗಳನ್ನು ಉತ್ಪಾದಿಸುತ್ತದೆಯೋ ಅದು ಅದಷ್ಟು ಬೇಗ ಮಾರಾಟವಾಗಬೇಕು. ತನ್ಮೂಲಕ ಉತ್ಪಾದನೆ ಮತ್ತು ಉಪಭೋಗದ ಈ ಚಕ್ರವು ಸಂತುಲಿತವಾಗಿ ಮತ್ತು ವೇಗವಾಗಿ ಚಲಿಸುತ್ತಿರಬೇಕು. ಇದು ಸಾಧ್ಯವಾಗಬೇಕಾದರೆ ಜನರು ಸಾಮಾನ್ಯವಾಗಿ ತಮ್ಮ ಆರ್ಥಿಕ ಚಟುವಟಿಕೆಗಳಿಂದ ಗಳಿಸುವ ಆದಾಯವನ್ನು ಖರ್ಚು ಮಾಡುತ್ತಿರಬೇಕು. ಒಂದು ವೇಳೆ ಅದು ಅವರ ಆವಶ್ಯಕತೆಗಳಿಗಿಂತ ಹೆಚ್ಚಾಗಿದ್ದರೆ ರಾಷ್ಟ್ರದ ಕಡಿಮೆ ಆದಾಯದ ಜನರಿಗೆ ಅದನ್ನು ವರ್ಗಾಯಿಸುವಷ್ಟು ಅವರು ವಿಶಾಲ ಮನಸ್ಕರಾಗಿರಬೇಕು. ತನ್ಮೂಲಕ ಅವರು ಕೂಡಾ ತಮ್ಮ ಜೀವನಾವಶ್ಯಕ ವಸ್ತುಗಳನ್ನು ಅಗತ್ಯಾನುಸಾರ ಖರೀದಿಸುವಂತಾಗುವುದು. ಆದರೆ ನೀವು ಇದಕ್ಕೆ ತದ್ವಿರುದ್ಧವಾಗಿ ಮಾಡುತ್ತಿರುವಿರಿ. ಜನರಿಗೆ ಅವರ ಅಗತ್ಯಕ್ಕಿಂತ ಹೆಚ್ಚಿನ ಆದಾಯವಾದರೆ

ಅದನ್ನವರು ಜಿಪುಣತೆಯಿಂದ (ಅದಕ್ಕೆ ನೀವು ಆತ್ಮ ನಿಯಂತ್ರಣ, ತ್ಯಾಗ ಇತ್ಯಾದಿ ಪದಗಳನ್ನು ಬಳಸುತ್ತೀರಿ) ತಮ್ಮ ಅಂತಸ್ತಿಗೆ ತಕ್ಕಂತೆ ಇರುವ ಅಗತ್ಯಗಳ ಒಂದು ದೊಡ್ಡ ಅಂಶವನ್ನು ಪೂರ್ತಿ ಮಾಡದಿರಬೇಕೆಂದು ಕಲಿಸುತ್ತೀರಿ. ಈ ರೀತಿ ಪ್ರತಿಯೊಬ್ಬನೂ ಹೆಚ್ಚೆಚ್ಚು ಸಂಪತ್ತು ಶೇಖರಿಸಲು ಪ್ರಯತ್ನಿಸಬೇಕೆಂದು ಜನರಿಗೆ ಕಲಿಸುತ್ತೀರಿ. ನಿಮ್ಮ ಲೆಕ್ಕಾಚಾರದಂತೆ ಈ ರೀತಿ ಶೇಖರಿಸಲ್ಪಟ್ಟಂತಹ ಸಂಪತ್ತು ಬಂಡವಾಳದ ರೂಪದಲ್ಲಿ ವ್ಯಾಪಾರ-ಉದ್ದಿಮೆಗಳಿಗೆ ಹರಿದು ಬರುವುದು. ಆದರೆ ಇದರಿಂದಾಗಿ ಈಗ ಮಾರುಕಟ್ಟೆಯಲ್ಲಿರುವ ಸರಕಿನ ಒಂದು ದೊಡ್ಡ ಭಾಗವು ನಿರುಪಯುಕ್ತವಾಗಿ ಬಿದ್ದಿರುವುದು. ಏಕೆಂದರೆ ಯಾರಲ್ಲಿ ಖರೀದಿಸುವ ಶಕ್ತಿ (Purchasing Power) ಮೊದಲೇ ಕಡಿಮೆ ಇದೆಯೋ ಅವರಂತೂ ಅದನ್ನು ಖರೀದಿಸಲು ಶಕ್ತರಾಗಲಿಲ್ಲ. ಯಾರಲ್ಲಿ ಖರೀದಿಸುವ ಶಕ್ತಿಯಿತ್ತೋ ಅವರು ಉತ್ಪಾದನೆಯ ಬಹುದೊಡ್ಡ ಭಾಗವನ್ನು ಖರೀದಿಸಲಿಲ್ಲ. ಯಾರ ಬಳಿ ತಮ್ಮ ಅಗತ್ಯಕ್ಕಿಂತ ಹೆಚ್ಚು ಸಂಪತ್ತು ಬಂತೋ ಅವರು ಅದನ್ನು ಇತರರಿಗೆ ವರ್ಗಾಯಿಸುವ ಬದಲು ತಮ್ಮ ಬಳಿಯೇ ಶೇಖರಿಸಿಟ್ಟರು. ಪ್ರತಿಯೊಂದು ಆರ್ಥಿಕ ಚಕ್ರ(Economic Cycle)ದಲ್ಲೂ ಇದೇ ರೀತಿಯಾದರೆ ಆರ್ಥಿಕ ಉತ್ಪಾದನೆಗಳ ಒಂದು ದೊಡ್ಡ ಭಾಗ ಅನುಪಯುಕ್ತವಾಗಿ ಉಳಿದು ಬಿಡುವುದು. ಸರಕಿನ ಉಪಭೋಗ ಕಡಿಮೆಯಾದಾಗ ಉದ್ಯೋಗಾವಕಾಶಗಳೂ ಕಡಿಮೆಯಾಗುತ್ತವೆ. ಉದ್ಯೋಗಾವಕಾಶ ಕಡಿಮೆಯಾದರೆ ಆದಾಯವೂ ಕಡಿಮೆಯಾಗುವುದು. ಆದಾಯದ ಕೊರತೆಯು ಮತ್ತೆ ವ್ಯಾಪಾರಿ ಸರಕಿನ ವಿಕ್ರಯದಲ್ಲಿ ಕಡಿತ ಮಾಡುವುದು. ಈ ರೀತಿ ಕೆಲವರ ಉಳಿತಾಯ ಪ್ರವೃತ್ತಿ ಅನೇಕರ ದುಃಸ್ಥಿತಿಗೆ ಕಾರಣವಾಗುತ್ತದೆ. ಕಟ್ಟಕಡೆಗೆ ಇದು ಆ ಉಳಿತಾಯ ಮಾಡುವ ವ್ಯಕ್ತಿಗಳ ಮಟ್ಟಿಗೂ ಮಾರಕವಾಗುವುದು. ಏಕೆಂದರೆ ಈ ರೀತಿ ಸಂಪತ್ತನ್ನು ಜೀವನಾವಶ್ಯಕ ವಸ್ತುಗಳನ್ನು ಖರೀದಿಸುವ ಬದಲು ಉಳಿತಾಯ ಮಾಡಿ ಮತ್ತೆ ಉತ್ಪಾದನಾ ಕಾರ್ಯದಲ್ಲಿ ಅದನ್ನು ತೊಡಗಿಸಿದಾಗ ಆ ರೀತಿಯ ಉತ್ಪಾದನೆಯು ಮಾರಾಟವಾಗುವುದಾದರೂ ಹೇಗೆ?

ಈ ವಾಸ್ತವಿಕತೆಯ ಬಗ್ಗೆ ಯೋಚಿಸಿದಾಗ ತಿಳಿದು ಬರುವುದೇನೆಂದರೆ ಜನರು ತಮ್ಮ ಆದಾಯವನ್ನು ಖರ್ಚು ಮಾಡುವ ಬದಲು ಉಳಿತಾಯ ಮಾಡುವ ಮತ್ತು ಶೇಖರಿಸುವ ಕಡೆಗೆ ಒಲವು ಹೊಂದಲು ಕಾರಣಗಳೇನು ಎಂಬುದನ್ನು ಕಂಡು ಹಿಡಿಯುವುದು ನೈಜ ಆರ್ಥಿಕ ಅಗತ್ಯವಾಗಿದೆ. ಇಡೀ ಸಮುದಾಯದ ಆರ್ಥಿಕ ಪ್ರಗತಿಯಾಗಬೇಕಾದರೆ ಒಂದೆಡೆ ಜನರಿಗೆ ಅವರ ಕಷ್ಟ ಕಾಲದಲ್ಲಿ ಆರ್ಥಿಕ ನೆರವು ಸಿಗುವಂತಾಗಬೇಕು. ಅದಕ್ಕಾಗಿ ಸಾಮೂಹಿಕ ವ್ಯವಸ್ಥೆಯನ್ನು ಏರ್ಪಡಿಸಬೇಕು. ತನ್ಮೂಲಕ ಜನರಿಗೆ ತಮ್ಮ ಆದಾಯವನ್ನು ಉಳಿಸುವ ಅಗತ್ಯವೇ ಬೀಳಬಾರದು. ಇನ್ನೊಂದೆಡೆ ಶೇಖರಿಸಲ್ಪಟ್ಟ ಸಂಪತ್ತಿನ ಮೇಲೆ ಝಕಾತನ್ನು ಕಡ್ಡಾಯಗೊಳಿಸುವ ಮೂಲಕ ಬಂಡವಾಳ ಶೇಖರಣೆಯ ಪ್ರವೃತ್ತಿಗೆ ಕಡಿವಾಣ ಹಾಕಬೇಕು. ಜತೆಗೆ ಅದರ ಹೊರತಾಗಿಯೂ ಶೇಖರಣೆಯಾಗುವ ಸಂಪತ್ತಿನಲ್ಲಿನ ಒಂದು ಭಾಗ ಸಂಪತ್ತಿನ ಸುತ್ತುವಿಕೆಯಲ್ಲಿ ಕಡಿಮೆ ಪಾಲು ಪಡೆದವರಿಗೆ ಸಂದಾಯವಾಗಬೇಕು. ಆದರೆ ನೀವು ಇದಕ್ಕೆ

ವಿರುದ್ಧವಾಗಿ ಜನರಿಗೆ ಬಡ್ಡಿಯ ಆಮಿಷವೊಡ್ಡಿ ಅವರಲ್ಲಿರುವ ಸಹಜ ಜಿಪುಣತೆಯನ್ನು ಇನ್ನಷ್ಟು ಉತ್ತೇಜಿಸುತ್ತೀರಿ. ಜಿಪುಣನಲ್ಲದವನಿಗೂ ಖರ್ಚು ಮಾಡುವುದಕ್ಕಿಂತ ಉಳಿತಾಯ ಮಾಡುವುದು ಒಳ್ಳೆಯದೆಂಬ ಪಾಠ ಕಲಿಸುತ್ತೀರಿ.

ಈ ದುಷ್ಟ ವಿಧಾನದಿಂದ ಸಾಮೂಹಿಕ ಹಿತಾಸಕ್ತಿಗೆ ವಿರುದ್ಧವಾಗಿ ಶೇಖರಣೆಯಾಗುವ ಬಂಡವಾಳವನ್ನು ನೀವು ಉತ್ಪಾದನಾ ಕಾರ್ಯದಲ್ಲಿ ತೊಡಗಿಸುವುದಾದರೂ ಅದನ್ನು ಬಡ್ಡಿಯ ಮಾಧ್ಯಮದಿಂದ ತೊಡಗಿಸುತ್ತೀರಿ. ಇದು ಸಾರ್ವಜನಿಕ ಹಿತಾಸಕ್ತಿಯ ವಿರುದ್ಧ ನೀವು ಮಾಡುವ ದ್ವಿತೀಯ ಅನ್ಯಾಯವಾಗಿದೆ. ಹೀಗೆ ಶೇಖರಿಸಲ್ಪಟ್ಟಂತಹ ಬಂಡವಾಳವು ಲಾಭ-ನಷ್ಟದ ಪಾಲುದಾರಿಕೆಯ ಆಧಾರದಲ್ಲಿ ಬಂದಿದ್ದರೆ ಅಡ್ಡಿಯಿರಲಿಲ್ಲ. ಆದರೆ ನೀವದನ್ನು ವ್ಯಾಪಾರ ಉದ್ದಿಮೆಗಳಲ್ಲಿ ತೊಡಗಿಸುವುದು ಹೇಗೆ? ಅದರಲ್ಲಿ ಲಾಭವಾಗಲೀ ಆಗದಿರಲಿ, ಕಡಿಮೆ ಲಾಭವಾಗಲಿ ಹೆಚ್ಚಾಗಲಿ ಬಂಡವಾಳ ಹೂಡುವವನಿಗೆ ಅವನ ನಿಗದಿತ ದರದಲ್ಲಿ ಲಾಭ ಸಿಗುತ್ತಲೇ ಇರಬೇಕು. ಈ ರೀತಿ ನೀವು ಆರ್ಥಿಕತೆಗೆ ದ್ವಿಮುಖ ನಷ್ಟವನ್ನುಂಟು ಮಾಡಿದ್ದೀರಿ. ಒಂದು ಧನವನ್ನು ಖರ್ಚು ಮಾಡದೆ ಶೇಖರಿಸಿಟ್ಟಂತಹ ನಷ್ಟ. ಇನ್ನೊಂದು ಹಾಗೆ ಶೇಖರಿಸಲ್ಪಟ್ಟ ಹಣವು ಸಾಮೂಹಿಕ ಆರ್ಥಿಕತೆಯ ಕಡೆಗೆ ಮರಳಿದರೂ ಪಾಲುದಾರಿಕೆಯ ಆಧಾರದಲ್ಲಿ ಬಂಡವಾಳ ರೂಪದಲ್ಲಿ ಮರಳಲಿಲ್ಲ. ಬದಲಾಗಿ ಸಾಲದ ರೂಪದಲ್ಲಿ ಇಡೀ ಸಮಾಜದ ವ್ಯಾಪಾರ- ಉದ್ದಿಮೆಗಳ ಮೇಲೆ ಹೇರಲ್ಪಟ್ಟಿತು. ನಿಮ್ಮ ಕಾನೂನು ಅದಕ್ಕೆ ಖಚಿತ ಲಾಭದ ಭರವಸೆ ನೀಡಿತು. ನಿಮ್ಮ ಈ ತಪ್ಪು ವ್ಯವಸ್ಥೆಯಿಂದಾಗಿ ಜನರು ತಮಗೆ ದೊರೆಯುವ ಖರೀದಿಸುವ ಸಾಮರ್ಥ್ಯ(Purchasing Power)ವನ್ನು ಸಾಮೂಹಿಕ ಉತ್ಪಾದನೆಯ ಖರೀದಿಯಲ್ಲಿ ವಿನಿಯೋಗಿಸುವ ಬದಲು ಅದನ್ನು ಶೇಖರಿಸಿಟ್ಟು ಬಡ್ಡಿಯ ಸಾಲದ ರೂಪದಲ್ಲಿ ಸಮಾಜದ ಮೇಲೆ ಹೇರುತ್ತಾರೆ. ಹೀಗೆ ನಿತ್ಯ ಏರುತ್ತಿರುವ ಸಾಲ ಮತ್ತು ಬಡ್ಡಿಯ ಹೊರೆಯಿಂದ ಮುಕ್ತಿ ಪಡೆಯುವುದೆಂತು ಎಂದು ಸಮಾಜವು ಪೇಚಾಟಕ್ಕೆ ಸಿಲುಕಿದೆ. ಏಕೆಂದರೆ ಅದರ ಉತ್ಪಾದನೆಯು ಪೇಟೆಯಲ್ಲಿ ಮಾರಾಟವಾಗುತ್ತಿಲ್ಲ. ಜನರಲ್ಲಿ ಹಣವಿಲ್ಲದ ಕಾರಣ ಅವರು ಅದನ್ನು ಖರೀದಿಸುವ ಸ್ಥಿತಿಯಲ್ಲಿಲ್ಲ. ಸಹಸ್ರಾರು ಜನರು ದುಡ್ಡಿದ್ದೂ ಅದನ್ನು ಬಡ್ಡಿಯಲ್ಲಿ ತೊಡಗಿಸುವ ಆಶೆಯಿಂದ ಅದನ್ನು ಖರೀದಿಸುವುದಿಲ್ಲ.

ಬಡ್ಡಿಯ ಒತ್ತಡದಿಂದಾಗಿ ವ್ಯಾಪಾರಿಯು ಬಂಡವಾಳವನ್ನು ವ್ಯರ್ಥ ಕಾರ್ಯಗಳಲ್ಲಿ ತೊಡಗಿಸಲಾರನು ಮತ್ತು ಹೆಚ್ಚೆಚ್ಚು ಲಾಭ ತರಬಲ್ಲ ವಿಧಾನದಲ್ಲಿ ಅದನ್ನು ಬಳಸುವನು ಎಂದು ನೀವು ಬಡ್ಡಿಯ ಉಪಯುಕ್ತತೆಯ ಕುರಿತು ಹೇಳುತ್ತೀರಿ. ಬಡ್ಡಿ ದರವು ಮೌನವಾಗಿ ವ್ಯಾಪಾರ-ಉದ್ದಿಮೆಗಳ ಮಾರ್ಗದರ್ಶನ ಮಾಡುತ್ತದೆ. ಅದರಿಂದಾಗಿಯೇ ಬಂಡವಾಳವು ಎಲ್ಲ ವ್ಯಾಪಾರ-ಉದ್ದಿಮೆಗಳ ಪೈಕಿ ಅತ್ಯಧಿಕ ಲಾಭ ತರುವ ಕಡೆಗೇ ಹರಿಯುತ್ತದೆಂದು ನೀವು ವಾದಿಸುತ್ತೀರಿ. ಆದರೆ ನಿಮ್ಮ ವಾದದ ಹಿಂದಿರುವ ವಾಸ್ತವಿಕತೆ ಏನೆಂಬುದನ್ನು ಒಮ್ಮೆ ಅವಲೋಕಿಸಿ ನೋಡಿ. ನಿಜವಾಗಿ ಬಡ್ಡಿಯು ಮಾಡಿರುವ ಪ್ರಥಮ ಸೇವೆಯೆಂದರೆ ಲಾಭ ಮತ್ತು ಉಪಯೋಗದ ಇತರೆಲ್ಲ ವಿವರಣೆಗಳನ್ನು ತ್ಯಜಿಸಿ ಕೇವಲ ಆರ್ಥಿಕ ಲಾಭ

ಮತ್ತು ಭೌತಿಕ ಉಪಯೋಗ ಎಂಬ ವಿವರಣೆಯನ್ನು ಮಾತ್ರ ಉಳಿಸಿಕೊಂಡಿದೆ. ಈ ರೀತಿ ಬಂಡವಾಳದ ಹರಿವು ಏಕಮುಖವಾಯಿತು. ಹಿಂದೆ ಅದು ಆರ್ಥಿಕ ಲಾಭದ ಹೊರತು ಇತರ ಲಾಭಗಳಿರುವ ಕಡೆಗೂ ಹರಿಯುತ್ತಿತ್ತು. ಆದರೆ ಈಗ ಅದು ಕೇವಲ ಹಣದ ಲಾಭ ಖಚಿತ ಇರುವ ಕಡೆಗೆ ಮಾತ್ರ ಹರಿಯುತ್ತದೆ. ಬಡ್ಡಿ ದರದ ಮೂಲಕ ಅದು ಮಾಡಿರುವ ಇನ್ನೊಂದು ಸೇವೆಯೆಂದರೆ ಬಂಡವಾಳದ ಲಾಭದಾಯಕ ಉಪಯೋಗದ ಮಾನದಂಡ ಸಮಾಜದ ಲಾಭವಲ್ಲ, ಕೇವಲ ಬಂಡವಾಳ ಹೂಡುವವನ ಲಾಭವಾಗಿದೆ. ಉದಾಹರಣೆಗೆ ಬಡ್ಡಿ ದರವು 10 ಶೇಕಡಾ ವಾರ್ಷಿಕ ಅಥವಾ ಅದಕ್ಕಿಂತ ಹೆಚ್ಚಿನ ಲಾಭ ತರುವ ಕಾರ್ಯದಲ್ಲಿ ಮಾತ್ರ ಬಂಡವಾಳ ತೊಡಗಬೇಕೆಂದು ನಿರ್ಧರಿಸುತ್ತದೆ. ಅದಕ್ಕಿಂತ ಕಡಿಮೆ ಲಾಭ ತರುವ ಯಾವ ಕಾರ್ಯವೂ ಬಂಡವಾಳದ ವಿನಿಯೋಗಕ್ಕೆ ಅರ್ಹವಾಗುವುದಿಲ್ಲ.

ಈಗ ಉದಾಹರಣೆಗೆ ಎರಡು ಯೋಜನೆಗಳನ್ನು ತೆಗೆದುಕೊಳ್ಳಿ. ಒಂದೆಡೆ ಬಡವರಿಗೆ ಕಡಿಮೆ ಬಾಡಿಗೆಗೆ ಕೊಡಲಿಕ್ಕಾಗಿ ವಸತಿಗಳನ್ನು ನಿರ್ಮಿಸಬೇಕಾಗಿದೆ. ಇನ್ನೊಂದೆಡೆ ಒಂದು ಭವ್ಯ ಚಿತ್ರ ಮಂದಿರವನ್ನು ನಿರ್ಮಿಸಬೇಕಾಗಿದೆ. ಪ್ರಥಮ ಯೋಜನೆಯಲ್ಲಿ 10 ಶೇಕಡಾಕ್ಕಿಂತ ಕಡಿಮೆ ಲಾಭದ ನಿರೀಕ್ಷೆಯಿದೆ. ದ್ವಿತೀಯ ಯೋಜನೆಯಲ್ಲಿ ಅದಕ್ಕಿಂತ ಹೆಚ್ಚು ಲಾಭ ಬರಬಹುದು. ದ್ವಿತೀಯ ಯೋಜನೆಯಂತೆ ಬಂಡವಾಳವು ಅವನ ಅಜ್ಞಾನದಿಂದಾಗಿ ಪ್ರಥಮ ಯೋಜನೆಯತ್ತ ಹರಿಯುವ ಸಾಧ್ಯತೆಯಿತ್ತು. ಅಥವಾ ಅವೆರಡರ ಪೈಕಿ ಯಾವುದಕ್ಕೂ ಬಂಡವಾಳ ಹರಿಯುವ ಸಾಧ್ಯತೆಯಿತ್ತು. ಆದರೆ ಈಗ ಬಡ್ಡಿ ದರದ ಮಾರ್ಗದರ್ಶನದ ಅನುಗ್ರಹದಿಂದಾಗಿ ಬಂಡವಾಳವು ನಿಸ್ಸಂಕೋಚವಾಗಿ ದ್ವಿತೀಯ ಯೋಜನೆಯ ಕಡೆಗೆ ಹರಿಯುತ್ತದೆ. ಪ್ರಥಮ ಯೋಜನೆಯನ್ನು ಅದು ಹಿಂದಕ್ಕೆ ತಳ್ಳಿ ಬಿಡುತ್ತದೆ. ಯಾವ ಬಂಡವಾಳಿಗನೂ ಅದರತ್ತ ಕಣ್ಣೆತ್ತಿಯೂ ನೋಡುವುದಿಲ್ಲ. ಅಲ್ಲದೆ ಬಡ್ಡಿ ದರದಿಂದಾಗಿ ವ್ಯಾಪಾರಿಯು ಹೇಗಾದರೂ ಮಾಡಿ ತನ್ನ ಲಾಭದ ದರವನ್ನು ಬಂಡವಾಳಿಗನ ಬಡ್ಡಿ ದರಕ್ಕಿಂತ ಮೇಲೆಯೇ ಇಡಲು ಪ್ರಯತ್ನಿಸುತ್ತಾನೆ. ಅದಕ್ಕಾಗಿ ಎಷ್ಟೇ ಅನೈತಿಕ ವಿಧಾನಗಳನ್ನು ಅನುಸರಿಸಬೇಕಾಗಿ ಬಂದರೂ ಸರಿಯೆ. ಉದಾಹರಣೆಗೆ ಒಬ್ಬನು ಒಂದು ಚಿತ್ರ ನಿರ್ಮಾಣ ಕಂಪೆನಿಯನ್ನು ಸ್ಥಾಪಿಸಿದ್ದಾನೆ. ಅವನು ಅದರಲ್ಲಿ ತೊಡಗಿಸಿರುವ ಬಂಡವಾಳಕ್ಕೆ 10 ಶೇಕಡಾ ಬಡ್ಡಿ ನೀಡಬೇಕಾಗಿದೆ. ಆಗ ಅವನು ಹೇಗಾದರೂ ಮಾಡಿ ಅದಕ್ಕಿಂತ ಹೆಚ್ಚಿನ ಲಾಭವನ್ನು ಗಳಿಸಲು ಶ್ರಮಿಸುತ್ತಾನೆ. ನೈತಿಕವಾಗಿ ಶುದ್ಧ ಮತ್ತು ವೈಜ್ಞಾನಿಕವಾಗಿ ಉಪಯುಕ್ತವಾದ ಚಿತ್ರದಿಂದ ಅಷ್ಟೊಂದು ಲಾಭ ಗಳಿಸುವುದು ಸಾಧ್ಯವಾಗದಿದ್ದರೆ ನಗ್ನ ಮತ್ತು ಅಶ್ಲೀಲ ಚಿತ್ರಗಳನ್ನು ರಚಿಸಿ, ಜನರ ಕೀಳಭಿರುಚಿಯನ್ನು ಕೆರಳಿಸುವಂತಹ ಜಾಹಿರಾತುಗಳನ್ನು ನೀಡಿ ಜನರ ವಿಷಯಾಸಕ್ತಿಗೆ ಕಿಡಿ ಹಚ್ಚುವ ಮೂಲಕ ಜನರು ಅವನ ಚಿತ್ರ ನೋಡಲಿಕ್ಕೆ ಮುಗಿ ಬೀಳುವಂತೆ ಮಾಡುತ್ತಾನೆ.

ನಿಮ್ಮ ಅಭಿಪ್ರಾಯದಂತೆ ಬಡ್ಡಿಯಿಂದ ದೊರೆಯುವ ಲಾಭದ ವಾಸ್ತವಿಕತೆಯಿದು. ಈ ಲಾಭವನ್ನು ಬಡ್ಡಿಯಿಂದಲ್ಲದೆ ಬೇರಾವ ವಿಧಾನದಿಂದಲೂ ಗಳಿಸಲು ಸಾಧ್ಯವಿಲ್ಲ. ಯಾವ

ಅಗತ್ಯವು ಬಡ್ಡಿಯಿಲ್ಲದೆ ಪೂರ್ಣಗೊಳ್ಳುವುದಿಲ್ಲವೆಂದು ನೀವು ವಾದಿಸುತ್ತಿರುವಿರೋ ಅದನ್ನೊಮ್ಮೆ ನೋಡೋಣ. ಸಾಲವು ಮಾನವ ಜೀವನದ ಅಗತ್ಯಗಳಲ್ಲಿ ಒಂದಾಗಿದೆ ಎಂಬುದರಲ್ಲಿ ಸಂಶಯವಿಲ್ಲ. ಅದರ ಅಗತ್ಯ ವ್ಯಕ್ತಿಗಳಿಗೆ ತಮ್ಮ ವೈಯಕ್ತಿಕ ಆವಶ್ಯಕತೆಗಳಿಗಾಗಿ ಮತ್ತು ವ್ಯಾಪಾರ-ಉದ್ದಿಮೆ-ಕೃಷಿಯೇ ಮುಂತಾದ ಆರ್ಥಿಕ ಕಾರ್ಯಗಳಲ್ಲಿ ಎಲ್ಲ ಸಮಯದಲ್ಲೂ ಬೀಳುತ್ತದೆ. ಸರಕಾರವೂ ಸೇರಿದಂತೆ ಎಲ್ಲ ಸಾಮಾಜಿಕ ಸಂಸ್ಥೆಗಳಿಗೂ ಅದರ ಅಗತ್ಯ ಬೀಳುತ್ತದೆ. ಆದರೆ ಬಡ್ಡಿಯಿಲ್ಲದೆ ಸಾಲ ಸಿಗುವ ವ್ಯವಸ್ಥೆಯಾಗಲಾರದೆಂದು ಹೇಳುವುದು ತಪ್ಪು. ಇಂದು ವ್ಯಕ್ತಿಗಳಿಂದ ಹಿಡಿದು ಸರಕಾರದ ತನಕ ಯಾರಿಗೂ ಒಂದು ಪೈಸೆಯೂ ಬಡ್ಡಿರಹಿತ ಸಾಲ ಸಿಗದೆ ಇರಲು ಕಾರಣ ನೀವು ಬಡ್ಡಿಯನ್ನು ಕಾನೂನುಬದ್ಧಗೊಳಿಸಿರುವುದಾಗಿದೆ. ಮೊದಲು ನೀವು ಅದನ್ನು ನಿಷೇಧಿಸಿ ಮತ್ತು ಇಸ್ಲಾಮಿನಲ್ಲಿ ಸೂಚಿಸಲಾಗಿರುವ ಆರ್ಥಿಕತೆಯ ಜೊತೆಗೆ ನೈತಿಕತೆಯ ವ್ಯವಸ್ಥೆಯನ್ನೂ ಅಳವಡಿಸಿ ನೋಡಿ. ಆಗ ನಿಮಗೆ ವೈಯಕ್ತಿಕ ಆವಶ್ಯಕತೆ, ವ್ಯಾಪಾರ ಮತ್ತು ಸಾಮಾಜಿಕ ಅಗತ್ಯಗಳು- ಎಲ್ಲದಕ್ಕೂ ಬಡ್ಡಿರಹಿತ ಸಾಲ ದೊರೆಯುವುದು. ಮಾತ್ರವಲ್ಲ ದೇಣಿಗೆಗಳೂ ಸಿಗಲಾರಂಭಿಸುವುವು. ಇಸ್ಲಾಮ್ ಕಾರ್ಯತಃ ಇದನ್ನು ಸಾಧಿಸಿ ತೋರಿಸಿದೆ. ಮುಸ್ಲಿಮ್ ಸಮಾಜವು ಶತಮಾನಗಳ ತನಕ ತನ್ನೆಲ್ಲ ಆರ್ಥಿಕ ಚಟುವಟಿಕೆಗಳನ್ನು ಬಡ್ಡಿಯಿಲ್ಲದೆ ನಡೆಸಿದೆ. ಇಂದಿನ ಈ ನತದೃಷ್ಟ ಬಡ್ಡಿಯ ಯುಗ ಬರುವುದಕ್ಕಿಂತ ಮುಂಚೆ ಬಡ್ಡಿಯಿಲ್ಲದೆ ಸಾಲ ಸಿಗಲಿಲ್ಲವೆಂಬ ಕಾರಣದಿಂದ ಯಾವ ಮುಸ್ಲಿಮನ ಶವವೂ ಸಂಸ್ಕಾರವಾಗದೆ ಉಳಿಯಲಿಲ್ಲ. ಯಾವ ಮುಸ್ಲಿಮನ ವ್ಯಾಪಾರ, ಉದ್ದಿಮೆ, ಕೃಷಿ ಕಾರ್ಯಗಳೂ ಬಡ್ಡಿರಹಿತ ಸಾಲ ಸಿಗದ ಕಾರಣ ನಿಂತು ಹೋಗಿಲ್ಲ. ಯಾವುದೇ ಮುಸ್ಲಿಮ್ ಸರಕಾರಕ್ಕೆ ಸಮಾಜ ಕಲ್ಯಾಣ ಅಥವಾ ಯುದ್ಧದ ಅಗತ್ಯಗಳಿಗೆ ಬಡ್ಡಿರಹಿತ ಸಾಲ ಸಿಗದೆ ಇರಲಿಲ್ಲ. ಆದ್ದರಿಂದ ಬಡ್ಡಿ ಯಿಲ್ಲದ ಸಾಲದ ವ್ಯವಸ್ಥೆ ಅವ್ಯಾವಹಾರಿಕ, ಸಾಲ ಕೊಡುವ ಮತ್ತು ಪಡೆಯುವ ಪದ್ಧತಿಯು ಬಡ್ಡಿಯ ಬುನಾದಿಯ ಮೇಲೆ ಮಾತ್ರ ನಿಲ್ಲಬಲ್ಲುದು ಎಂಬ ನಿಮ್ಮ ವಾದವು ತಪ್ಪು. ಅದಕ್ಕೆ ಯಾವುದೇ ವೈಚಾರಿಕ ಪುರಾವೆಯ ಅಗತ್ಯವಿಲ್ಲ. ನಾವು ನಮ್ಮ ಶತಮಾನಗಳ ಇತಿಹಾಸದಿಂದ ಅದನ್ನು ತಪ್ಪೆಂದು ಸಾಬೀತುಪಡಿಸಿದ್ದೇವೆ.

ಇಂದಿನ ಕಾಲದ ಆರ್ಥಿಕ ಆವಶ್ಯಕತೆಗಳಿಗಾಗಿ ಬಡ್ಡಿರಹಿತ ಸಾಲದ ವ್ಯವಸ್ಥೆ ಹೇಗೆ ಆಗಬಹುದು ಎಂಬುದು ಇಲ್ಲಿ ವಿಷಯವಲ್ಲ. ಅದರ ಬಗ್ಗೆ ನಾವು ಮುಂದಿನ ಅಧ್ಯಾಯವೊಂದರಲ್ಲಿ ಚರ್ಚಿಸುವೆವು.



# ಬಡ್ಡಿಯ ಸಕಾರಾತ್ಮಕ ಕಾರಣಗಳು

ಹಿಂದಿನ ಅಧ್ಯಾಯದ ಚರ್ಚೆಯಿಂದ ಒಂದು ವಿಷಯ ಸಾಬೀತಾಗುತ್ತದೆ. ಬಡ್ಡಿಯು ಒಂದು ಸಮರ್ಥನೀಯ ವಸ್ತುವಲ್ಲ. ಅದು ನ್ಯಾಯದ ಬೇಡಿಕೆಯೂ ಅಲ್ಲ. ಅದೊಂದು ಆರ್ಥಿಕ ಅಗತ್ಯವಲ್ಲ. ವಾಸ್ತವದಲ್ಲಿ ಲಾಭದ ಯಾವ ಅಂಶವೂ ಅದರಲ್ಲಿಲ್ಲ. ಆದರೆ ಬಡ್ಡಿಯ ನಿಷೇಧವು ಈ ನಕಾರಾತ್ಮಕ ಕಾರಣಗಳನ್ನು ಮಾತ್ರ ಅವಲಂಬಿಸಿರುವುದಲ್ಲ. ನಿಜವಾಗಿ ಅದು ಒಂದು ನಷ್ಟದಾಯಕ ವಸ್ತುವಾಗಿದ್ದು ಅನೇಕ ಕಾರಣಗಳಿಂದ ಅದು ಅತ್ಯಧಿಕ ಹಾನಿಕಾರಕವಾಗಿದೆ.

ಓರ್ವ ವಿಚಾರವಂತ ವ್ಯಕ್ತಿಗೆ ಈ ಮಲಿನ ವಸ್ತುವಿನ ನಿಷೇಧದಲ್ಲಿ ಸ್ವಲ್ಪವೂ ಸಂಶಯ ಉಳಿಯದಂತೆ ನಾವು ಅದರ ಒಂದೊಂದು ಹಾನಿಯನ್ನೂ ವಿವರವಾಗಿ ಅವಲೋಕಿಸುವೆವು.

## ಬಡ್ಡಿಯ ನೈತಿಕ ಮತ್ತು ಆಧ್ಯಾತ್ಮಿಕ ಹಾನಿಗಳು

ಮೊಟ್ಟಮೊದಲು ನೀತಿ ಮತ್ತು ಆಧ್ಯಾತ್ಮಿಕತೆಯ ದೃಷ್ಟಿಕೋನದಿಂದ ನೋಡೋಣ. ಏಕೆಂದರೆ ನೀತಿ ಮತ್ತು ಆತ್ಮವೇ ಮಾನವತೆಯ ನೈಜ ಜೀವಾಳವಾಗಿದೆ. ನಮ್ಮ ಈ ಆತ್ಮಕ್ಕೆ ಯಾವ ವಸ್ತು ಹಾನಿಕಾರಕವಾಗಿದೆಯೋ ಅದು ವರ್ಜ್ಯವೇ ಆಗಿದೆ. ಇತರ ದೃಷ್ಟಿಯಿಂದ ಅದರಲ್ಲಿ ಎಷ್ಟೇ ಲಾಭವಿದ್ದರೂ ಸರಿಯೆ. ಬಡ್ಡಿಯ ಮನೋವೈಜ್ಞಾನಿಕ ವಿಶ್ಲೇಷಣೆ ಮಾಡಿ ನೋಡಿದಾಗ ತಿಳಿಯುವುದೇನೆಂದರೆ ಹಣವನ್ನು ಕೂಡಿಸಿಡುವ ಬಯಕೆಯಿಂದ ಹಿಡಿದು ಬಡ್ಡಿ ವ್ಯವಹಾರದ ವಿಭಿನ್ನ ಘಟ್ಟಗಳ ವರೆಗೆ ಮನುಷ್ಯನ ಸಂಪೂರ್ಣ ಮನೋಭಾವವು ಸ್ವಾರ್ಥ, ಜಿಪುಣತೆ, ಸಂಕುಚಿತ ಮನೋಭಾವ, ಕಠಿಣ ಮನಸ್ಸು ಮತ್ತು ಧನಪೂಜೆಯಂತಹ ಗುಣಗಳಿಂದ ಪ್ರಭಾವಿತವಾಗಿರುತ್ತದೆ. ಮನುಷ್ಯನು ಈ ವ್ಯವಹಾರದಲ್ಲಿ ಮುಂದುವರಿದಂತೆಲ್ಲಾ ಈ ಗುಣಗಳೇ ಅವನಲ್ಲಿ ಬೆಳೆಯುತ್ತಿರುತ್ತವೆ. ಇದಕ್ಕೆ ವ್ಯತಿರಿಕ್ತವಾಗಿ ಝಕಾತ್ ಮತ್ತು ದಾನಧರ್ಮಗಳ ಸಂಕಲ್ಪ ಮಾಡುವುದರಿಂದ ಹಿಡಿದು ಅದನ್ನು ಪೂರ್ತಿಗೊಳಿಸುವ ತನಕ ನಿಮ್ಮ ಮನೋಭಾವವು ಔದಾರ್ಯ, ತ್ಯಾಗ, ಅನುಕಂಪ, ಹೃದಯ ವೈಶಾಲ್ಯ, ಸಾಹಸ ಮತ್ತು ಹಿತಾಕಾಂಕ್ಷೆಯಂತಹ ಗುಣಗಳಿಂದ ಪ್ರಭಾವಿತವಾಗಿರುತ್ತದೆ. ಇದನ್ನು ಮೈಗೂಡಿಸಿಕೊಳ್ಳುವುದರಿಂದ ಈ ಗುಣಗಳೇ ಮನುಷ್ಯನಲ್ಲಿ ಬೆಳೆಯುತ್ತವೆ. ನೈತಿಕ ಗುಣಗಳ ಎರಡು ವಿಧಗಳಲ್ಲಿ ಮೊದಲನೆಯದು ಅತ್ಯಂತ ಕೆಟ್ಟದು ಮತ್ತು ಎರಡನೆಯದು ಅತ್ಯುತ್ತಮವೆಂದು ಲೋಕದ ಪ್ರತಿಯೊಬ್ಬ ಮನುಷ್ಯನ ಮನಸ್ಸೂ ಸಾಕ್ಷಿ ಹೇಳುವುದು.

## ನಾಗರಿಕ ಮತ್ತು ಸಾಮಾಜಿಕ ಹಾನಿಗಳು

ಈಗ ನಾಗರಿಕತೆಯ ದೃಷ್ಟಿಯಿಂದ ನೋಡಿರಿ. ಸ್ವಲ್ಪ ಆಲೋಚಿಸಿದರೆ ಪ್ರತಿಯೊಬ್ಬನೂ ಇದನ್ನು ಸುಲಭದಲ್ಲಿ ಅರ್ಥ ಮಾಡಿಕೊಳ್ಳಬಲ್ಲನು. ಯಾವ ಸಮಾಜದಲ್ಲಿ ವ್ಯಕ್ತಿಗಳು ಪರಸ್ಪರರೊಂದಿಗೆ ಸ್ವಾರ್ಥದ ವ್ಯವಹಾರ ಮಾಡುತ್ತಾರೋ, ಯಾರು ತನ್ನ ವೈಯಕ್ತಿಕ ಲಾಭ ಮತ್ತು ಸ್ವಾರ್ಥವಿಲ್ಲದೆ ಯಾರಿಗೂ ನೆರವಾಗುವುದಿಲ್ಲವೋ, ಒಬ್ಬನ ಸಂಕಷ್ಟವು ಇನ್ನೊಬ್ಬನ ಪಾಲಿಗೆ ಲಾಭ ಗಳಿಸುವ ಸಂದರ್ಭವಾಗುವುದೋ ಮತ್ತು ಧನಿಕ ವರ್ಗದ ಹಿತಾಸಕ್ತಿಯು ಬಡವರ ಹಿತಾಸಕ್ತಿಗೆ ವಿರುದ್ಧವಾಗಿರುವುದೋ ಅಂತಹ ಸಮಾಜ ಎಂದೂ ಬಲಿಷ್ಠವಾಗಲಾರದು. ಅದರ ಪ್ರತಿಯೊಂದು ಅಂಗವೂ ಸದಾ ವಿಚ್ಛಿದ್ರತೆಯ ಕಡೆಗೇ ಹೋಗುತ್ತಿರುವುದು. ಈ ಪರಿಸ್ಥಿತಿಗೆ ಪೂರಕವಾಗಿ ಇನ್ನು ಕೆಲವು ಕಾರಣಗಳೂ ಇದ್ದರೆ ಅಂತಹ ಸಮಾಜದ ವಿಭಿನ್ನ ವರ್ಗಗಳು ಪರಸ್ಪರ ಸಂಘರ್ಷಕ್ಕೆ ಇಳಿಯದೆ ಇರಲಾರವು. ಇದಕ್ಕೆ ವ್ಯತಿರಿಕ್ತವಾಗಿ ಯಾವ ಸಮಾಜದ ಸಾಮೂಹಿಕ ವ್ಯವಸ್ಥೆಯು ಪರಸ್ಪರ ಸಹಾನುಭೂತಿಯ ಮೇಲೆ ಆಧಾರಿತವಾಗಿದೆಯೋ, ಯಾವ ಸಮಾಜದ ಜನರು ಪರಸ್ಪರ ಔದಾರ್ಯದ ವ್ಯವಹಾರ ಮಾಡುವರೋ, ಇತರರ ಸಂಕಷ್ಟದ ಸಮಯದಲ್ಲಿ ವಿಶಾಲ ಮನಸ್ಸಿನಿಂದ ನೆರವಾಗಲು ಮುಂದಾಗುತ್ತಾರೋ, ಶ್ರೀಮಂತರು ಬಡವರ ಜತೆ ಸಹಾನುಭೂತಿಯ ನೆರವು ಅಥವಾ ಕನಿಷ್ಠಪಕ್ಷ ನ್ಯಾಯಸಮ್ಮತ ಸಹಕಾರದ ವಿಧಾನವನ್ನು ಕೈಗೊಳ್ಳುತ್ತಾರೋ ಅಂತಹ ಸಮಾಜದಲ್ಲಿ ಪರಸ್ಪರ ಪ್ರೀತಿ, ಅನುಕಂಪ ಮತ್ತು ಆಸಕ್ತಿ ಬೆಳೆಯುವುದು. ಅದರ ಸದಸ್ಯರು ಪರಸ್ಪರ ಬೆಸೆದಿರುವರು. ಒಬ್ಬರಿಗೊಬ್ಬರು ನೆರವಾಗುವರು. ಅಲ್ಲಿ ಪರಸ್ಪರ ಒಡಕು ಮತ್ತು ಸಂಘರ್ಷಕ್ಕೆ ಅವಕಾಶವಿರಲಾರದು. ಆ ಸಮಾಜದಲ್ಲಿ ಪರಸ್ಪರ ಸಹಕಾರ ಮತ್ತು ಹಿತಾಕಾಂಕ್ಷೆಯಿಂದಾಗಿ ಪ್ರಗತಿಯ ಗತಿಯು ಮೊದಲನೆಯ ಸಮಾಜಕ್ಕಿಂತ ತೀವ್ರವಾಗಿರುವುದು.

ಅಂತಾರಾಷ್ಟ್ರೀಯ ಸಂಬಂಧಗಳ ಸ್ಥಿತಿಯೂ ಇದುವೇ ಆಗಿದೆ. ಒಂದು ರಾಷ್ಟ್ರವು ಇನ್ನೊಂದು ರಾಷ್ಟ್ರದ ಜತೆ ಔದಾರ್ಯ ಮತ್ತು ಅನುಕಂಪದ ವ್ಯವಹಾರವಿಟ್ಟು ಕೊಳ್ಳಬೇಕು. ಅದರ ಸಂಕಷ್ಟದ ಸಮಯದಲ್ಲಿ ಮನಬಿಚ್ಚಿ ನೆರವಾಗಬೇಕು. ಹಾಗಾದರೆ ಇನ್ನೊಂದು ಕಡೆಯಿಂದಲೂ ಅದಕ್ಕೆ ಪ್ರತಿಯಾಗಿ ಪ್ರೀತಿ, ಕೃತಜ್ಞತೆ ಮತ್ತು ನಿಸ್ವಾರ್ಥವಾದ ಸಹಾನುಭೂತಿಯೇ ಸಿಕ್ಕೀತು. ಆದರೆ ಅದೇ ರಾಷ್ಟ್ರವು ತನ್ನ ನೆರೆರಾಷ್ಟ್ರದ ಜತೆ ಸ್ವಾರ್ಥ ಮತ್ತು ಸಂಕುಚಿತ ಮನಸ್ಸಿನ ವ್ಯವಹಾರ ಮಾಡಿದರೆ, ಅದರ ಸಂಕಷ್ಟಗಳ ದುರ್ಲಾಭ ಪಡೆಯಲೆತ್ನಿಸಿದರೆ, ಸಂಪತ್ತಿನ ರೂಪದಲ್ಲಿ ಅದಕ್ಕೆ ಬಹಳ ಲಾಭವಾಗಲೂಬಹುದು. ಆದರೆ ಈ ಶೈಲಾಕ್ ವರ್ಗಕ್ಕೆ ಸೇರಿದ ನೆರೆಯಾತನ ಬಗ್ಗೆ ಆ ರಾಷ್ಟ್ರದ ಜನಮನಗಳಲ್ಲಿ ಪ್ರೀತಿ-ಅನುಕಂಪಗಳು ಖಂಡಿತ ಉಳಿಯಲಾರವು. ಕಳೆದ ಮಹಾಯುದ್ಧದ ಸಂದರ್ಭದಲ್ಲಿ ಬ್ರಿಟನ್ ಅಮೇರಿಕಾದ ಜತೆ ಒಂದು ದೊಡ್ಡ ಸಾಲದ ವ್ಯವಹಾರ ಮಾಡಿತ್ತು. ಅದು 'ಬ್ರೀಟನ್ ವುಡ್ ಎಗ್ರಿಮೆಂಟ್' (Breetton Wood Agreement) ಎಂಬ ಹೆಸರಲ್ಲಿ ಪ್ರಸಿದ್ಧವಾಗಿದೆ. ಮಹಾಯುದ್ಧದ

ತನ್ನ ಸಂಗಾತಿ ಮತ್ತು ಐಶ್ವರ್ಯವಂತ ಮಿತ್ರನಾಗಿದ್ದ ಅಮೇರಿಕ ತನಗೆ ಬಡ್ಡಿರಹಿತವಾಗಿ ಸಾಲ ನೀಡಬೇಕೆಂದು ಬ್ರಿಟನ್ ಬಯಸಿತ್ತು. ಆದರೆ ಅಮೇರಿಕ ಬಡ್ಡಿ ಬಿಟ್ಟು ಕೊಡಲು ಸಿದ್ಧವಾಗಲಿಲ್ಲ. ಬ್ರಿಟನ್ ತನ್ನ ಸಂಕಷ್ಟಗಳಿಂದಾಗಿ ಬಡ್ಡಿ ಕೊಡಲಿಕ್ಕೆ ಒಪ್ಪಲೇಬೇಕಾಯಿತು. ಅದರಿಂದ ಬ್ರಿಟಿಷ್ ಜನಾಂಗದ ಮೇಲೆ ಆದ ಪ್ರಭಾವವನ್ನು ಅಂದಿನ ಕಾಲದ ಬ್ರಿಟಿಷ್ ಬುದ್ಧಿಜೀವಿಗಳ ಬರಹ- ಭಾಷಣಗಳಿಂದ ತಿಳಿಯಬಹುದಾಗಿದೆ. ಖ್ಯಾತ ಅರ್ಥಶಾಸ್ತ್ರಜ್ಞರಾದ ಲಾರ್ಡ್ ಕೇನ್ಸ್ ಅವರು ಬ್ರಿಟನ್‌ನ ಪರವಾಗಿ ಈ ವ್ಯವಹಾರವನ್ನು ಕುದುರಿಸಿದ್ದರು. ಅವರು ತಮ್ಮ ಈ ಕಾರ್ಯವನ್ನು ಮುಗಿಸಿ ಮರಳಿದಾಗ ಬ್ರಿಟನ್‌ನ ಹೌಸ್ ಆಫ್ ಲಾರ್ಡ್ಸ್(ರಾಜ್ಯ ಸಭೆ)ನಲ್ಲಿ ಭಾಷಣ ಮಾಡುತ್ತಾ "ಅಮೇರಿಕವು ನಮಗೆ ಬಡ್ಡಿರಹಿತ ಸಾಲ ನೀಡಲು ಒಪ್ಪದ ದುಃಖವನ್ನು ನಾನು ನನ್ನ ಜೀವಮಾನದಲ್ಲೇ ಮರೆಯಲಾರೆ. ಚರ್ಚಿಲ್‌ರಂತಹ ಅಮೇರಿಕ ಪರ ವ್ಯಕ್ತಿ ಕೂಡಾ ನಮ್ಮ ಜತೆ ಆದಂತಹ ಈ ಸಾಹುಕಾರನಂತಹ ವ್ಯವಹಾರದ ಆಳದಲ್ಲಿ ನನಗೆ ದೊಡ್ಡ ಅಪಾಯಗಳು ಕಾಣಿಸುತ್ತವೆ. ನಿಜವಾಗಿ ಅದರಿಂದ ನಮ್ಮ ಪರಸ್ಪರ ಸಂಬಂಧದ ಮೇಲೆ ಬಹಳ ಕೆಟ್ಟ ಪರಿಣಾಮ ಉಂಟಾಗಿದೆ" ಎಂದು ಉದ್ಗರಿಸಿದ್ದರು. ಅಂದಿನ ವಿತ್ತ ಸಚಿವ ಡಾ| ಡಾಲ್ಟಿನ್ ಅವರು ಈ ವಿಷಯವನ್ನು ಪಾರ್ಲಿಮೆಂಟಿನ ಅನುಮೋದನೆಗಾಗಿ ಮಂಡಿಸುತ್ತಾ ಹೀಗೆ ಹೇಳಿದ್ದರು- "ಇದೊಂದು ಭಾರೀ ಹೊರೆ. ಇದನ್ನು ಹೊತ್ತುಕೊಂಡೇ ನಾವು ಯುದ್ಧದಿಂದ ಹೊರ ಬರುತ್ತಿದ್ದೇವೆ. ಇದು ನಮ್ಮ ತ್ಯಾಗ ಮತ್ತು ನಿಷ್ಠೆಗಳಿಗೆ ಸಂದ ವಿಚಿತ್ರ ಪ್ರತಿಫಲ. ಅದನ್ನು ನಾವು ಸಂಯುಕ್ತ ಧ್ಯೇಯಗಳಿಗಾಗಿ ಕೈಗೊಂಡಿದ್ದೆವು. ಈ ಅದ್ಭುತ ಅನ್ಯಾಯಪೂರ್ಣ ಕೊಡುಗೆಯ ಬಗ್ಗೆ ಭವಿಷ್ಯದ ಇತಿಹಾಸಕಾರರೇ ಸರಿಯಾಗಿ ಬೆಳಕು ಚೆಲ್ಲಬಲ್ಲರು... ನಮಗೆ ಬಡ್ಡಿರಹಿತ ಸಾಲ ಕೊಡಬೇಕೆಂದು ನಾವು ಕೇಳಿ ಕೊಂಡಿದ್ದೆವು. ಆದರೆ ಇದು ವ್ಯಾವಹಾರಿಕ ರಾಜಕೀಯವಲ್ಲ ಎಂದು ನಮಗೆ ಉತ್ತರಿಸಲಾಗಿತ್ತು."

ಇದು ಬಡ್ಡಿಯ ಸ್ವಾಭಾವಿಕ ಪರಿಣಾಮ. ಅದು ಯಾವಾಗಲೂ ಎಲ್ಲ ಸ್ಥಿತಿಗಳಲ್ಲೂ ಪ್ರಕಟವಾಗುತ್ತದೆ. ಇಬ್ಬರು ವ್ಯಕ್ತಿಗಳ ಮಧ್ಯೆ ಈ ವ್ಯವಹಾರ ನಡೆಯಲಿ ಅಥವಾ ಎರಡು ದೇಶಗಳ ಮಧ್ಯೆ ನಡೆಯಲಿ. ಬ್ರಿಟಿಷರು ಅದನ್ನು ಒಪ್ಪುತ್ತಿರಲಿಲ್ಲ. ವೈಯಕ್ತಿಕ ವ್ಯವಹಾರಗಳಲ್ಲಿ ಬಡ್ಡಿ ಒಂದು ಕೆಟ್ಟ ವಸ್ತುವಾಗಿದೆಯೆಂಬುದನ್ನು ಅವರು ಇಂದಿಗೂ ಒಪ್ಪುವುದಿಲ್ಲ. ನೀವು ಓರ್ವ ಬ್ರಿಟಿಷನೊಂದಿಗೆ ಬಡ್ಡಿರಹಿತ ಸಾಲದ ಮಾತೆತ್ತಿದ ಕೂಡಲೇ ಅವನು ಇದು ವ್ಯಾವಹಾರಿಕ ವ್ಯಾಪಾರ(Practical Business)ವಲ್ಲ ಎನ್ನುವನು. ಆದರೆ ಅವನ ರಾಷ್ಟ್ರೀಯ ಸಂಕಷ್ಟದ ಸಂದರ್ಭದಲ್ಲಿ ಅವನ ನೆರೆ ರಾಷ್ಟ್ರವು ಅವನೊಂದಿಗೆ ಈ 'ವ್ಯಾವಹಾರಿಕ ವ್ಯಾಪಾರ'ದ ಕ್ರಮವನ್ನು ಅಳವಡಿಸಿದಾಗ ಅವನು ಬೊಬ್ಬಿಡತೊಡಗಿದ. ಆಗ ಇಡೀ ಲೋಕದ ಮುಂದೆ ಆ ಬ್ರಿಟಿಷನು ಬಡ್ಡಿಯು ಹೃದಯಗಳನ್ನು ಛಿದ್ರಗೊಳಿಸುವ ಮತ್ತು ಸಂಬಂಧಗಳನ್ನು ಕೆಡಿಸುವ ವಸ್ತುವಾಗಿದೆ ಎಂಬ ವಾಸ್ತವಿಕತೆಗೆ ಸಾಕ್ಷ್ಯವಹಿಸಿದ.

## ಆರ್ಥಿಕ ನಷ್ಟಗಳು

ಈಗ ಅದರ ಆರ್ಥಿಕ ಮುಖವನ್ನು ನೋಡಿರಿ. ಆರ್ಥಿಕ ಜೀವನದಲ್ಲಿ ಆಗುವ ಯಾವುದೇ ಸಾಲದ ವ್ಯವಹಾರಕ್ಕೆ ಬಡ್ಡಿಯ ಸಂಬಂಧವಿರುತ್ತದೆ. ಸಾಲಗಳು ವಿವಿಧ ರೀತಿಯಲ್ಲಿರುತ್ತವೆ-

1. ತಮ್ಮ ವೈಯಕ್ತಿಕ ಆವಶ್ಯಕತೆಗಳಿಗಾಗಿ ಜನರು ಪಡೆಯುವಂತಹ ಸಾಲ.

2. ವ್ಯಾಪಾರ, ಉದ್ದಿಮೆ ಮತ್ತು ಕೃಷಿ ಕಾರ್ಯಗಳಲ್ಲಿ ತೊಡಗಿದವರು ತಮ್ಮ ಲಾಭದಾಯಕ ಕಾರ್ಯಗಳಲ್ಲಿ ತೊಡಗಿಸಲಿಕ್ಕಾಗಿ ಪಡೆಯುವ ಸಾಲ.

3. ಸರಕಾರವು ತಮ್ಮ ಪ್ರಜೆಗಳಿಂದ ಎತ್ತುವ ಸಾಲ. ಅವುಗಳು ವಿಭಿನ್ನ ರೂಪದಲ್ಲಿರುತ್ತದೆ. ಅವುಗಳಲ್ಲಿ ಕೆಲವು ಸಾಲ ಲಾಭದಾಯಕವಲ್ಲದ ಉದ್ದೇಶಗಳಿಗಾಗಿರುತ್ತವೆ. ಉದಾ: ಕಾಲುವೆಗಳು, ರೈಲು ಮಾರ್ಗಗಳು ಮತ್ತು ಜಲ ವಿದ್ಯುತ್ ಯೋಜನೆಗಳಿಗಾಗಿ ಪಡೆಯುವ ಸಾಲ.

4. ಅಂತಾರಾಷ್ಟ್ರೀಯ ಹಣಕಾಸು ಸಂಸ್ಥೆಗಳಿಂದ ಸರಕಾರಗಳು ಪಡೆಯುವ ಸಾಲ.

ಈ ಪೈಕಿ ಪ್ರತಿಯೊಂದು ಸಾಲದ ಮೇಲೆ ಬಡ್ಡಿ ವಿಧಿಸುವುದರಿಂದ ಆಗುವ ನಷ್ಟಗಳ ಕುರಿತು ನೋಡೋಣ.

## ವೈಯಕ್ತಿಕ ಅಗತ್ಯಗಳಿಗಾಗಿ ಸಾಲ

ಲೋಕದಲ್ಲಿ ಅತ್ಯಧಿಕ ಬಡ್ಡಿ ವ್ಯವಹಾರವು, ಸಾಲ ನೀಡುವ ವ್ಯವಹಾರ(Money Lending Business)ದಲ್ಲಿ ನಡೆಯುತ್ತದೆ. ಇದು ಕೇವಲ ಭಾರತೀಯ ಉಪ ಭೂಖಂಡಕ್ಕೆ ಸೀಮಿತವಾಗಿರುವುದಲ್ಲ. ಇದೊಂದು ವಿಶ್ವವ್ಯಾಪೀ ಪಿಡುಗು. ಇದರಿಂದ ಲೋಕದ ಯಾವ ದೇಶವೂ ಹೊರತಾಗಿಲ್ಲ. ಏಕೆಂದರೆ ಜಗತ್ತಿನಲ್ಲಿ ಎಲ್ಲೂ ಬಡ ಮತ್ತು ಮಧ್ಯಮ ವರ್ಗದ ಜನರ ವೈಯಕ್ತಿಕ ಅಗತ್ಯಗಳಿಗಾಗಿ ಬಡ್ಡಿರಹಿತ ಸಾಲವಂತಿರಲಿ ಬಡ್ಡಿಯ ವ್ಯಾಪಾರೀ ದರದಲ್ಲಿ ಸಾಲ ಒದಗಿಸುವ ವ್ಯವಸ್ಥೆಯೂ ಇಲ್ಲ. ಸರಕಾರವು ಇದನ್ನು ತನ್ನ ಹೊಣೆಗಾರಿಕೆಯೆಂದು ಪರಿಗಣಿಸುವುದಿಲ್ಲ. ಸಮಾಜಕ್ಕೂ ಈ ಅಗತ್ಯದ ಪರಿವೆಯಿಲ್ಲ. ಸಾವಿರಗಟ್ಟಲೆ ಅಥವಾ ಲಕ್ಷಗಟ್ಟಲೆ ಲಾಭ ಬರುವ ವ್ಯವಹಾರಗಳಲ್ಲಿ ಮಾತ್ರ ಬ್ಯಾಂಕ್‌ಗಳು ಕೈಹಾಕುತ್ತವೆ. ಒಬ್ಬ ಬಡವನು ತನ್ನ ತುರ್ತು ಅಗತ್ಯಕ್ಕಾಗಿ ಬ್ಯಾಂಕ್‌ಗೆ ತಲಪುವ ಮತ್ತು ಅಲ್ಲಿಂದ ಸಾಲ ಗಳಿಸುವ ಸಾಧ್ಯತೆಯೂ ಇಲ್ಲ. ಆದ್ದರಿಂದ ಎಲ್ಲ ದೇಶಗಳಲ್ಲಿ ಕಾರ್ಮಿಕರು, ರೈತರು, ಚಿಕ್ಕಪುಟ್ಟ ವ್ಯಾಪಾರಿಗಳು, ಕಡಿಮೆ ಸಂಬಳದ ನೌಕರರು ಮತ್ತು ಬಡ ಜನಸಾಮಾನ್ಯರು ಅನಿವಾರ್ಯವಾಗಿ ತಮ್ಮ ಸಂಕಷ್ಟದ ವೇಳೆ ನಮ್ಮಲ್ಲಿ ಗಿಡುಗನಂತೆ ತನ್ನ ಶಿಕಾರಿಗಾಗಿ ಹೊಂಚು ಹಾಕುತ್ತಿರುವ ಸಾಹುಕಾರರ ಬಳಿ ಹೋಗಲೇಬೇಕಾಗುತ್ತದೆ. ಈ ವ್ಯಾಪಾರದಲ್ಲಿ ಬಡ್ಡಿ ದರ ಎಷ್ಟು ಅಧಿಕವಿದೆಯೆಂದರೆ ಒಮ್ಮೆ ಬಡ್ಡಿಯ ಸಾಲದ ಬಲೆಯಲ್ಲಿ ಸಿಲುಕಿದ ವ್ಯಕ್ತಿ ಜೀವನಪರ್ಯಂತ ಅದರಿಂದ ಬಿಡುಗಡೆ ಹೊಂದುವುದಿಲ್ಲ. ತಾತ ಪಡೆದ ಸಾಲವು ಮೊಮ್ಮಗನ ತನಕ ವಾರೀಸು

ಹಕ್ಕಿನ ರೂಪದಲ್ಲಿ ವರ್ಗಾಯಿಸಲ್ಪಡುತ್ತದೆ. ಅಸಲಿನ ಹಲವು ಪಟ್ಟು ಬಡ್ಡಿ ಸಂದಾಯ ಮಾಡಿದ ಬಳಿಕವೂ ಅಸಲು ಹಣವು ಬಂಡೆಯಂತೆ ಆತನ ಎದೆಯ ಮೇಲೆ ನಾಟಲ್ಪಟ್ಟಿರುತ್ತದೆ. ಹಲವೊಮ್ಮೆ ಸಾಲಗಾರನು ಸ್ವಲ್ಪ ಸಮಯ ಬಡ್ಡಿ ಪಾವತಿ ಮಾಡಲು ಶಕ್ತನಾಗಿರುವುದಿಲ್ಲ. ಆಗ ಸಾಹುಕಾರನು ಆ ಬಡ್ಡಿಯನ್ನು ಅಸಲಿಗೆ ಸೇರಿಸಿ ಹೆಚ್ಚಿಸಿದ ಬಡ್ಡಿ ದರದಲ್ಲಿ ಇನ್ನೊಂದು ಸಾಲದ ರೂಪದಲ್ಲಿ ಆ ಸಾಲಗಾರನಿಗೆ ನೀಡುತ್ತಾನೆ. ತನ್ಮೂಲಕ ಆ ಬಡಪಾಯಿ ಹಿಂದಿಗಿಂತ ಹೆಚ್ಚು ಭಾರದಡಿ ನಲುಗುತ್ತಾನೆ. ಬ್ರಿಟನ್‌ನಲ್ಲಿ ಇಂತಹ ಸಾಲಗಳ ಬಡ್ಡಿ ದರ ಕನಿಷ್ಠ 48 ಶೇಕಡಾ ಇದೆ. ಇದು ಕಾನೂನುಬದ್ಧ ದರವಾಗಿದೆ. ಆದರೆ ನಿಜವಾಗಿ ಅಲ್ಲಿ ಈ ಸಾಲವು 250ರಿಂದ 400 ಶೇಕಡಾ ದರದಲ್ಲಿ ನೀಡಲ್ಪಡುತ್ತದೆ. 1200-1300 ಶೇಕಡಾ ಬಡ್ಡಿ ದರದಲ್ಲಿ ನಡೆದ ಸಾಲದ ವ್ಯವಹಾರಗಳೂ ಇವೆ. ಅಮೇರಿಕಾದಲ್ಲಿ ಇಂತಹ ಸಾಹುಕಾರರ ಕಾನೂನುಬದ್ಧ ಬಡ್ಡಿ ದರವು 30ರಿಂದ 60 ಶೇಕಡಾದವರೆಗಿದೆ. ಆದರೆ ಅಲ್ಲಿ ವ್ಯವಹಾರ ನಡೆಯುತ್ತಿರುವುದು 100ರಿಂದ 260 ಶೇಕಡಾ ದರದಲ್ಲಾಗಿರುತ್ತದೆ. ಹಲವು ಸಲ ಈ ದರವು 480 ಶೇಕಡಾದವರೆಗೆ ತಲಪುತ್ತದೆ. ನಮ್ಮ ಈ ಉಪಭೂಖಂಡದಲ್ಲಿ ಸಾಹುಕಾರರು ಓರ್ವ ಬಡವನಿಗೆ 48 ಶೇಕಡಾ ದರದಲ್ಲಿ ಸಾಲ ನೀಡಿದರೆ ಅವನು ದೊಡ್ಡ ಪುಣ್ಯವಂತನೆನಿಸುತ್ತಾನೆ. ಅನ್ಯಥಾ ಸಾಮಾನ್ಯ ಬಡ್ಡಿ ದರವು 75 ಶೇಕಡಾದಿಂದ 150 ಶೇಕಡಾದ ತನಕವಿದೆ. 300ರಿಂದ 350 ಶೇಕಡಾ ಬಡ್ಡಿ ದರ ವಿಧಿಸುವ ಸಾಹುಕಾರರೂ ಇದ್ದಾರೆ.

ಈ ಮಹಾ ಪಿಡುಗಿನಲ್ಲಿ ಪ್ರತಿಯೊಂದು ದೇಶದ ಬಡ ಮತ್ತು ಮಧ್ಯಮ ವರ್ಗದ ಒಂದು ದೊಡ್ಡ ವಿಭಾಗವು ಸಿಲುಕಿಕೊಂಡಿದೆ. ಇದರಿಂದಾಗಿ ಈ ಕಡಿಮೆ ಆದಾಯದ ಜನರ ಗಳಿಕೆಯ ಒಂದು ದೊಡ್ಡ ಭಾಗವನ್ನು ಸಾಹುಕಾರರು ಪಡೆಯುವಂತಾಗಿದೆ. ಹಗಲಿರುಳಿನ ಕಠಿಣ ದುಡಿಮೆಯ ಫಲವಾಗಿ ಅವರಿಗೆ ಸಿಗುವ ಒಂದಿಷ್ಟು ಸಂಬಳ ಅಥವಾ ಮಜೂರಿಯಿಂದ ಬಡ್ಡಿ ಸಂದಾಯ ಮಾಡಿದ ಬಳಿಕ ಅವರ ಪಾಲಿಗೆ ಎರಡು ಹೊತ್ತಿನ ಕೂಳಿಗೆ ಸಾಕಾಗುವಷ್ಟು ಹಣ ಕೂಡಾ ಉಳಿದಿರುವುದಿಲ್ಲ. ಇದು ಅವರ ಚಾರಿತ್ರ್ಯವನ್ನು ಕೆಡಿಸುತ್ತದೆ. ಅವರನ್ನು ಅಪರಾಧಗಳ ಕಡೆಗೆ ತಳ್ಳುತ್ತದೆ. ಅವರ ಜೀವನ ಮಟ್ಟವನ್ನು ಮತ್ತು ಅವರ ಮಕ್ಕಳ ಶಿಕ್ಷಣ ಮಟ್ಟವನ್ನು ಅವನತಿಯೆಡೆಗೆ ಒಯ್ಯುತ್ತಿದೆ. ಅದರಿಂದಾಗುವ ಶಾಶ್ವತ ಚಿಂತೆಯಿಂದ ದೇಶದ ಕಾರ್ಮಿಕರ ಸಾಮರ್ಥ್ಯವು ಕುಸಿಯುತ್ತದೆ. ತಮ್ಮ ದುಡಿಮೆಯ ಫಲವನ್ನು ಸಾಹುಕಾರನು ಕಸಿಯುತ್ತಿರುವುದನ್ನು ಕಂಡಾಗ ಅವರಲ್ಲಿ ಕೆಲಸದ ಆಸಕ್ತಿಯೂ ಕಡಿಮೆಯಾಗುತ್ತದೆ. ಈ ರೀತಿ ಬಡ್ಡಿ ವ್ಯಾಪಾರದ ಈ ವಿಧಾನವು ಒಂದು ದೊಡ್ಡ ಅನ್ಯಾಯವಾಗಿರುವುದು ಮಾತ್ರವಲ್ಲ ಅದರಿಂದ ಸಾಮೂಹಿಕ ಆರ್ಥಿಕತೆಗೆ ದೊಡ್ಡ ನಷ್ಟವೂ ಉಂಟಾಗುತ್ತದೆ. ಒಂದು ದೇಶದ ಉತ್ಪಾದನೆಗಳ ಮೂಲವಾಗಿರುವ ಮತ್ತು ತಮ್ಮ ಶ್ರಮದಿಂದ ದೇಶದ ಒಟ್ಟು ಪ್ರಗತಿಯ ಆಧಾರವಾದ ಸಂಪತ್ತನ್ನು ಉತ್ಪಾದಿಸುವ ಜನರ ಮೇಲೆ ಅವರ ರಕ್ತ ಹೀರುತ್ತಿರಲು ಈ ಜಿಗಣೆಗಳನ್ನು ಹೇರುವುದು ಎಂತಹ ವಿಚಿತ್ರ ಮೂರ್ಖತನ? ಮಲೇರಿಯಾದಿಂದ ಇಷ್ಟು

ಲಕ್ಷ ಮಾನವ ಗಂಟೆ(Man Hour)ಗಳ ನಷ್ಟವಾಗುತ್ತದೆಂದೂ ಅದರಿಂದ ರಾಷ್ಟ್ರೀಯ ಉತ್ಪಾದನೆಯಲ್ಲಿ ಇಷ್ಟು ಕೊರತೆಯಾಗುತ್ತದೆಂದೂ ನೀವು ಲೆಕ್ಕ ಹಾಕುತ್ತಿರುತ್ತೀರಿ. ಅದರ ನಿವಾರಣೆಗಾಗಿ ನೀವು ಸೊಳ್ಳೆ ನಿರ್ಮೂಲನಕ್ಕಾಗಿ ಪ್ರಯತ್ನಿಸುತ್ತೀರಿ. ಆದರೆ ನಿಮ್ಮ ಬಡ್ಡಿಕೋರ ಸಾಹುಕಾರರು ನಿಮ್ಮ ಲಕ್ಷಗಟ್ಟಲೆ ಕಾರ್ಮಿಕರನ್ನು ಎಷ್ಟು ಚಿಂತೆಗೀಡು ಮಾಡುತ್ತಾರೆ. ಅವರಿಗೆಷ್ಟು ಬೇಸರ ಮತ್ತು ನೋವುಂಟು ಮಾಡುತ್ತಾರೆ. ಅವರ ಕ್ರಿಯಾಶೀಲತೆ ಮತ್ತು ಕಾರ್ಯದಕ್ಷತೆಯನ್ನು ಎಷ್ಟು ಕುಂಠಿತಗೊಳಿಸುತ್ತಾರೆ ಮತ್ತು ಅದರ ಕೆಟ್ಟ ಪ್ರಭಾವ ನಿಮ್ಮ ಆರ್ಥಿಕ ಉತ್ಪಾದನೆಗಳ ಮೇಲೆ ಎಷ್ಟರ ಮಟ್ಟಿಗೆ ಬೀಳುತ್ತದೆ ಎಂಬುದನ್ನು ನೀವು ಲೆಕ್ಕ ಮಾಡುವುದಿಲ್ಲ. ಈ ಬಗ್ಗೆ ನಿಮ್ಮ ಅಸಡ್ಡೆ ಎಷ್ಟರ ಮಟ್ಟಿಗಿದೆಯೆಂದರೆ ನೀವು ಈ ಸಾಹುಕಾರರನ್ನು ಸದೆ ಬಡಿಯುವ ಬದಲು ಅವರ ಸಾಲಗಾರರನ್ನೇ ಹಿಡಿಯುತ್ತೀರಿ. ಸಾಹುಕಾರರಿಂದ ಹೀರಲು ಸಾಧ್ಯವಾಗದೆ ಉಳಿದಿರುವ ಅವರ ರಕ್ತವನ್ನು ನಿಮ್ಮ ನ್ಯಾಯಾಲಯಗಳು ಹೀರಿ ಆ ಸಾಹುಕಾರರಿಗೆ ಒಪ್ಪಿಸುತ್ತವೆ.

ಇದರ ಇನ್ನೊಂದು ಆರ್ಥಿಕ ನಷ್ಟವೇನೆಂದರೆ ಬಡವರ ಬಳಿಯಿರುವ ಅಳಿದುಳಿದ ಖರೀದಿ ಸಾಮರ್ಥ್ಯ(Purchasing Power)ವನ್ನು ಬಡ್ಡಿಕೋರ ಸಾಹುಕಾರರು ಕಸಿದುಕೊಳ್ಳುತ್ತಾರೆ. ಮೊದಲೇ ಲಕ್ಷಗಟ್ಟಲೆ ಜನರ ನಿರುದ್ಯೋಗ ಮತ್ತು ಕೋಟಿಗಟ್ಟಲೆ ಜನರ ಕಡಿಮೆ ಆದಾಯ ದಿಂದಾಗಿ ವ್ಯಾಪಾರ-ಉದ್ದಿಮೆಗಳ ಪ್ರಗತಿ ಕುಂಠಿತವಾಗಿರುತ್ತದೆ. ಅದರ ಮೇಲೆ ಉತ್ತಮ ಆದಾಯವಿರುವವರು ತಮ್ಮ ಆದಾಯವನ್ನು ಖರ್ಚು ಮಾಡದೆ ಹೆಚ್ಚೆಚ್ಚು ಉಳಿತಾಯ ಮಾಡಲು ನೀವು ಪ್ರೇರೇಪಿಸುತ್ತೀರಿ. ಇದರಿಂದ ವ್ಯಾಪಾರಕ್ಕೆ ಇನ್ನೊಂದು ಹಾನಿಯಾಯಿತು. ಇವೆಲ್ಲಕ್ಕಿಂತಲೂ ಮಿಗಿಲಾಗಿ ಕೋಟಿಗಟ್ಟಲೆ ಬಡ ಪ್ರಜೆಗಳಿಗೆ ಸಿಗುವ ಕಡಿಮೆ ಸಂಬಳ ಅಥವಾ ಮಜೂರಿಯನ್ನು ಅವರು ಜೀವನಾವಶ್ಯಕ ವಸ್ತುಗಳ ಖರೀದಿಗೆ ಬಳಸುವಂತಿಲ್ಲ. ಅದರ ಒಂದು ದೊಡ್ಡ ಭಾಗವನ್ನು ಸಾಹುಕಾರರು ಕಸಿದುಕೊಳ್ಳುತ್ತಾರೆ. ಅದು ವಸ್ತು ಮತ್ತು ಸೇವೆಗಳ ಖರೀದಿಯಲ್ಲಿ ಬಳಕೆಯಾಗುವ ಬದಲು ಸಮಾಜದ ತಲೆಯ ಮೇಲೆ ಬಡ್ಡಿಯ ಸಾಲದ ರೂಪದಲ್ಲಿ ಹೇರಲಿಕ್ಕಾಗಿ ಅದನ್ನು ಉಪಯೋಗಿಸಲಾಗುತ್ತದೆ. ಸ್ವಲ್ಪ ಲೆಕ್ಕ ಹಾಕಿ ನೋಡಿ. ಈ ಸಾಹುಕಾರರ ಬಲೆಗೆ ಸಿಲುಕಿದವರು ಜಗತ್ತಿನಲ್ಲಿ 5 ಕೋಟಿ ಜನರಾದರೂ ಇದ್ದರೆ ಅವರು ಸರಾಸರಿ 10ರೂ. ತಿಂಗಳಿಗೆ ಬಡ್ಡಿ ಪಾವತಿ ಮಾಡುತ್ತಿದ್ದರೆ ಪ್ರತಿ ತಿಂಗಳು 50 ಕೋಟಿ ರೂಪಾಯಿಯ ಸರಕು ಮಾರಾಟವಾಗದೆ ಉಳಿದು ಬಿಡುತ್ತದೆ. ಇಷ್ಟು ದೊಡ್ಡ ಮೊತ್ತವು ಆರ್ಥಿಕ ಉತ್ಪಾದನೆಯ ಕಾರ್ಯದಲ್ಲಿ ತೊಡಗುವ ಬದಲು ಪ್ರತಿ ತಿಂಗಳೂ ಇನ್ನಷ್ಟು ಬಡ್ಡಿ ಸಾಲಗಳ ಉತ್ಪಾದನೆಗೆ ಬಳಕೆಯಾಗುತ್ತಿರುತ್ತದೆ.*

---

*ಇಲ್ಲಿ ಒಂದು ವಿಷಯ ಉಲ್ಲೇಖಾರ್ಹವಾಗಿದೆ. ವಿಭಜನೆಗೆ ಮೊದಲು 1945ರ ಭಾರತದಲ್ಲಿ ಸಾಹುಕಾರರ ಸಾಲವು ಕನಿಷ್ಠ ಒಂದು ಸಹಸ್ರ ಕೋಟಿ ರೂಪಾಯಿಗಳಷ್ಟಾಗಿತ್ತು. ಇದು ಕೇವಲ ಒಂದು ದೇಶದ ಸ್ಥಿತಿ. ಇಡೀ ಜಗತ್ತಿನ ಈ ರೀತಿಯ ಸಾಲಗಳು ಎಷ್ಟಿರಬಹುದೆಂದು ಇದರಿಂದಲೇ ಊಹಿಸಬಹುದು. ಈ ವ್ಯವಹಾರದಲ್ಲಿ ಚಾಲ್ತಿಯಲ್ಲಿರುವ ಬಡ್ಡಿ ದರದ ಪ್ರಕಾರ ಎಷ್ಟು ಬೃಹತ್ ಮೊತ್ತವು ಸಾಹುಕಾರರಿಗೆ ತಲುಪುತ್ತದೆಂದೂ ಊಹಿಸಬಹುದಾಗಿದೆ

## ವ್ಯಾಪಾರದ ಸಾಲ

ಇನ್ನು ವ್ಯಾಪಾರ, ಉದ್ದಿಮೆ ಇತ್ಯಾದಿ ಉದ್ದೇಶಗಳಿಗೆ ಪಡೆಯುವ ಸಾಲದ ಮೇಲೆ ಬಡ್ಡಿ ವಿಧಿಸುವುದರಿಂದ ಆಗುವ ಆರ್ಥಿಕ ನಷ್ಟಗಳೇನೆಂಬುದನ್ನು ನೋಡೋಣ. ವ್ಯಾಪಾರ, ಉದ್ದಿಮೆ, ಕೃಷಿಯೇ ಮುಂತಾದ ಎಲ್ಲ ಆರ್ಥಿಕ ಚಟುವಟಿಕೆಗಳು ಪ್ರಗತಿ ಹೊಂದಬೇಕಾದರೆ ಅದರಲ್ಲಿ ಭಾಗವಹಿಸುವವರೆಲ್ಲರ ಲಾಭ ಮತ್ತು ಹಿತಾಸಕ್ತಿಯು ಅದಕ್ಕೆ ಪೂರಕವಾಗಿರಬೇಕು. ಅದರ ನಷ್ಟವು ಎಲ್ಲರ ನಷ್ಟವಾಗಿರಬೇಕು. ಆಗಲೇ ಅದನ್ನು ನಷ್ಟದ ಅಪಾಯದಿಂದ ರಕ್ಷಿಸಲು ಅವರು ಜಂಟಿ ಪ್ರಯತ್ನ ನಡೆಸುವರು. ಅದರ ಲಾಭವು ಎಲ್ಲರ ಲಾಭವಾಗಬೇಕು. ಆಗಲೇ ಅದನ್ನು ಹೆಚ್ಚಿಸಲು ಎಲ್ಲರೂ ತಮ್ಮ ಪೂರ್ಣ ಶಕ್ತಿಯನ್ನು ವಿನಿಯೋಗಿಸುವರು. ಆದ್ದರಿಂದ ಅದರ ಆರ್ಥಿಕ ಪ್ರಗತಿಯ ಬೇಡಿಕೆ ಏನೆಂದರೆ ಆ ವ್ಯವಹಾರದಲ್ಲಿ ತಮ್ಮ ಬೌದ್ಧಿಕ ಮತ್ತು ಶಾರೀರಿಕ ಶಕ್ತಿಯನ್ನು ತೊಡಗಿಸಿದವರು ಮಾತ್ರವಲ್ಲ ಕೇವಲ ಬಂಡವಾಳ ಒದಗಿಸುವವರ ನೆಲೆಯಲ್ಲಿ ಭಾಗವಹಿಸುವವರು ಕೂಡಾ ಅದರ ಲಾಭ ನಷ್ಟಗಳಲ್ಲಿ ಸಹಭಾಗಿಗಳಾಗಬೇಕು. ಆಗಲೇ ಅವರು ಅದರ ಪ್ರಗತಿ ಮತ್ತು ಅದನ್ನು ನಷ್ಟದಿಂದ ರಕ್ಷಿಸುವಲ್ಲಿ ಪೂರ್ತಿಯಾಗಿ ಆಸಕ್ತಿ ವಹಿಸುವರು. ಆದರೆ ಬಡ್ಡಿಯು ಕಾನೂನುಬದ್ಧವಾದ ಬಳಿಕ ಬಂಡವಾಳ ಹೂಡುವ ಜನರಿಗೆ ತಮ್ಮ ಬಂಡವಾಳವನ್ನು ಪಾಲುದಾರರ ನೆಲೆಯಲ್ಲಿ ಸಾಲ ನೀಡಿ ಒಂದು ನಿರ್ದಿಷ್ಟ ದರದಲ್ಲಿ ತಮ್ಮ ಲಾಭಾಂಶವನ್ನು ವಸೂಲು ಮಾಡುತ್ತಿರಬಹುದಾಗಿದೆ. ಈ ರೀತಿ ಸಮಾಜದ ಆರ್ಥಿಕ ಚಟುವಟಿಕೆಗಳಲ್ಲಿ ಒಂದು ವಿಚಿತ್ರ ಮತ್ತು ಅಸಹಜ ಅಂಶ ಬಂದು ಸೇರುತ್ತದೆ. ಇತರೆಲ್ಲ ಉತ್ಪಾದನಾ ಘಟಕಗಳಿಗೆ ವ್ಯತಿರಿಕ್ತವಾಗಿ ಅವರಿಗೆ ಅದರ ಲಾಭ-ನಷ್ಟಗಳಲ್ಲಿ ಯಾವುದೇ ಆಸಕ್ತಿ ಇರುವುದಿಲ್ಲ. ಅದರಿಂದ ನಷ್ಟವಾದರೆ ಎಲ್ಲರಿಗೂ ಅದು ಅನ್ವಯಿಸುತ್ತದೆ. ಆದರೆ ಬಂಡವಾಳ ಹೂಡುವವನಿಗೆ ಲಾಭದ ಗ್ಯಾರಂಟಿಯಿದೆ. ಆದ್ದರಿಂದ ಎಲ್ಲರೂ ನಷ್ಟವನ್ನು ತಡೆಯಲು ಪ್ರಯತ್ನಿಸುವರು. ಆದರೆ ಬಂಡವಾಳ ಹೂಡುವವನು ಮಾತ್ರ ಅದು ಪೂರ್ತಿಯಾಗಿ ದಿವಾಳಿಯಾಗುವ ತನಕ ನಿಶ್ಚಿಂತನಾಗಿರುವನು. ನಷ್ಟದ ಸಂದರ್ಭದಲ್ಲಿ ಆತ ವ್ಯಾಪಾರವನ್ನು ರಕ್ಷಿಸಲಿಕ್ಕಾಗಿ ನೆರವಿಗೆ ಧಾವಿಸಲಾರನು. ತನ್ನ ಆರ್ಥಿಕ ಹಿತಾಸಕ್ತಿಯನ್ನು ರಕ್ಷಿಸಲಿಕ್ಕಾಗಿ ತಾನು ನೀಡಿದ ಹಣವನ್ನು ಹಿಂದಕ್ಕೆ ಪಡೆಯುವನು. ಅದೇ ರೀತಿ ಆರ್ಥಿಕ ಉತ್ಪಾದನೆಯ ಪ್ರಗತಿಯಲ್ಲೂ ಅವನು ನೇರವಾಗಿ ಕಾಳಜಿ ವಹಿಸಲಾರನು. ಏಕೆಂದರೆ ಅವನ ಲಾಭವಂತೂ ನಿಶ್ಚಿತವಾಗಿದೆ. ಮತ್ತೇಕೆ ಅವನು ಅದರ ಪ್ರಗತಿ ಮತ್ತು ಯಶಸ್ಸಿಗಾಗಿ ತಲೆ ಕೆಡಿಸಿಕೊಳ್ಳಬೇಕು? ಒಟ್ಟಿನಲ್ಲಿ ಸಮಾಜದ ಲಾಭ-ನಷ್ಟಗಳ ಪರಿವೆಯಿಲ್ಲದೆ ಈ ವಿಚಿತ್ರ ಬಂಡವಾಳಿಗನು ದೂರ ನಿಂತು ತನ್ನ ಬಂಡವಾಳವನ್ನು 'ಬಾಡಿಗೆ'ಗೆ ಕೊಡುತ್ತಿರುವನು ಮತ್ತು ಯಾವುದೇ ಮುಲಾಜಿಲ್ಲದೆ ತನ್ನ 'ಬಾಡಿಗೆ'ಯನ್ನು ವಸೂಲು ಮಾಡುತ್ತಿರುವನು.

ಈ ಕೆಟ್ಟ ಪದ್ಧತಿಯಿಂದಾಗಿ ಬಂಡವಾಳ ಮತ್ತು ವ್ಯಾಪಾರದ ಮಧ್ಯೆ ಮೈತ್ರಿ ಮತ್ತು ಸಹಾನುಭೂತಿಯ ಸಹಕಾರಕ್ಕೆ ಬದಲಾಗಿ ಒಂದು ರೀತಿಯ ಕೆಟ್ಟ ಸ್ವಾರ್ಥದ ಸಂಬಂಧ

ಸ್ಥಾಪಿಸಿಬಿಟ್ಟಿದೆ. ಹಣ ಶೇಖರಿಸುವ ಮತ್ತು ಅದನ್ನು ಆರ್ಥಿಕ ಉತ್ಪಾದನೆಯ ಕಾರ್ಯದಲ್ಲಿ ತೊಡಗಿಸುವ ಅವಕಾಶವಿರುವವರು, ಆ ಬಂಡವಾಳದಿಂದ ಸ್ವತಃ ವ್ಯಾಪಾರ ಮಾಡುವುದೂ ಇಲ್ಲ. ವ್ಯಾಪಾರ ಮಾಡುವವರ ಜತೆ ಪಾಲುದಾರರಾಗುವುದೂ ಇಲ್ಲ. ಅವರು ತಮ್ಮ ಬಂಡವಾಳವು ಒಂದು ನಿಶ್ಚಿತ ದರದಲ್ಲಿ ಸಾಲದ ರೂಪದಲ್ಲಿ ತೊಡಗಬೇಕೆಂದೇ ಬಯಸುತ್ತಾರೆ. ಆ ದರ ಕೂಡಾ ಗರಿಷ್ಠವಾಗಿರಬೇಕೆಂದು ಅವರು ಇಷ್ಟಪಡುತ್ತಾರೆ. ಇದರ ಅನೇಕ ಹಾನಿಗಳ ಪೈಕಿ ಕೆಲವು ಸ್ಪಷ್ಟ ಹಾನಿಗಳು ಈ ಕೆಳಗಿನಂತಿವೆ:

1. ಬಂಡವಾಳದ ಒಂದು ಗಣನೀಯ ಭಾಗವು- ಕೆಲವೊಮ್ಮೆ ದೊಡ್ಡ ಭಾಗವು- ಅದರ ಬಳಕೆಯ ಸಂಪನ್ಮೂಲಗಳು ಇದ್ದರೂ ಬಡ್ಡಿ ದರ ಏರುವ ನಿರೀಕ್ಷೆಯಲ್ಲಿ ಹಾಗೆಯೇ ಬಿದ್ದಿರುತ್ತದೆ. ಕೆಲಸವಿಲ್ಲದ ಜನರು ಕೂಡಾ ಬೇಕಾದಷ್ಟಿರುತ್ತಾರೆ. ಆವಶ್ಯಕ ವಸ್ತುಗಳ ಬೇಡಿಕೆಯೂ ಇರುತ್ತದೆ. ಇವೆಲ್ಲಾ ಇದ್ದಾಗ್ಯೂ ಸಂಪನ್ಮೂಲಗಳು ಬಳಕೆಯಾಗುವುದಿಲ್ಲ. ಜನರು ಕೆಲಸದಲ್ಲಿ ತೊಡಗುವುದಿಲ್ಲ ಮತ್ತು ಮಾರುಕಟ್ಟೆಯ ನೈಜ ಬೇಡಿಕೆಗನುಸಾರ ಸರಕುಗಳು ಮಾರಾಟವಾಗುವುದಿಲ್ಲ. ಏಕೆಂದರೆ ಬಂಡವಾಳಿಗನು ಯಾವ ದರದ ಲಾಭ ಪಡೆಯಬಯಸುತ್ತಾನೋ ಅದು ಸಿಗುವ ನಿರೀಕ್ಷೆ ಅವನಿಗಿರುವುದಿಲ್ಲ. ಆದ್ದರಿಂದ ಅವನು ತನ್ನ ಬಂಡವಾಳವನ್ನು ವ್ಯಾಪಾರದಲ್ಲಿ ತೊಡಗಿಸುವುದಿಲ್ಲ.

2. ಹೆಚ್ಚಿನ ಬಡ್ಡಿ ದರದ ಆಸೆಯಿಂದಾಗಿ ಬಂಡವಾಳಶಾಹಿಗಳು ಬಂಡವಾಳವನ್ನು ವ್ಯಾಪಾರದ ನೈಜ ಅಗತ್ಯ ಮತ್ತು ಸಹಜ ಬೇಡಿಕೆಯಂತೆ ಹರಿಯಗೊಡದೆ ಅದನ್ನು ತಮ್ಮ ಹಿತಾಸಕ್ತಿಗೆ ಅನುಗುಣವಾಗಿ ಹರಿಸುತ್ತಲೂ ತಡೆಯುತ್ತಲೂ ಇರುತ್ತಾರೆ. ಅದರ ನಷ್ಟವು ಹೇರುವುದೆಂದರೆ ಒಂದು ಕಾಲುವೆಯ ಒಡೆಯನು ಹೊಲ-ಗದ್ದೆಗಳ ಅಗತ್ಯಾನುಸಾರ ಅದರ ನೀರನ್ನು ಬಿಡುವ ಮತ್ತು ತಡೆಯುವ ಬದಲು ನೀರಿನ ಅಗತ್ಯ ಇಲ್ಲದಿರುವಾಗ ಅದನ್ನು ಯಥೇಷ್ಟವಾಗಿ ಬಹಳ ಅಗ್ಗದ ದರದಲ್ಲಿ ಬಿಡುತ್ತಿದ್ದು ನೀರಿನ ಬೇಡಿಕೆಯು ಹೆಚ್ಚಾದಾಗ ನೀರಿನ ದರವನ್ನು ಏರಿಸುತ್ತಾ ಹೋಗುತ್ತಾನೆ. ಕೊನೆಗೆ ಆ ದರದಲ್ಲಿ ನೀರು ಪಡೆದು ಹೊಲ-ಗದ್ದೆಗಳಿಗೆ ನೀರಾವರಿ ಮಾಡುವುದೂ ನಷ್ಟದಾಯಕವಾಗಿ ಪರಿಣಮಿಸುತ್ತದೆ.

3. ಬಡ್ಡಿ ದರದಿಂದಾಗಿ ವ್ಯಾಪಾರ ಉದ್ದಿಮೆಗಳು ಒಂದು ಸಂತುಲಿತವಾದ ರೀತಿಯಲ್ಲಿ ನಡೆಯುವ ಬದಲು ವಾಣಿಜ್ಯ ಚಕ್ರ(Trade cycle)ದ ರೋಗಕ್ಕೆ ತುತ್ತಾಗುತ್ತಿರುತ್ತದೆ. ಅದರಲ್ಲಿ ಆಗಾಗ ವ್ಯಾಪಾರ ಮಂದವಾಗುತ್ತಿರುತ್ತದೆ. ಇದನ್ನು ನಾವು ಈಗಾಗಲೇ ವಿವರಿಸಿದ್ದೇವಷ್ಟೆ.

4. ಅದೇ ರೀತಿ ಬಂಡವಾಳವು ಸಾರ್ವತ್ರಿಕ ಹಿತಕ್ಕೆ ಲಾಭದಾಯಕ ಮತ್ತು ಅಗತ್ಯವಾದ ಕಾರ್ಯಗಳಿಗೆ ಹರಿಯುವುದಿಲ್ಲ. ಏಕೆಂದರೆ ಅವು ಮಾರುಕಟ್ಟೆಯ ಬಡ್ಡಿ ದರಕ್ಕೆ ಅನುಗುಣವಾಗಿ ಲಾಭ ನೀಡಲು ಶಕ್ತವಾಗಿರುವುದಿಲ್ಲ. ಸಮಾಜಕ್ಕೆ ಅನಗತ್ಯವಾದ ಆದರೆ ಆರ್ಥಿಕವಾಗಿ ಹೆಚ್ಚು ಲಾಭದಾಯಕವಾದ ಕಾರ್ಯಗಳೆಡೆಗೆ ಬಂಡವಾಳವು ಹರಿಯುತ್ತಿರುತ್ತದೆ. ಅಲ್ಲಿಯೂ ಬಡ್ಡಿ

ದರಕ್ಕಿಂತ ಹೆಚ್ಚಿನ ಲಾಭ ಗಳಿಸಲಿಕ್ಕಾಗಿ ಎಲ್ಲ ರೀತಿಯ ವಾಮಮಾರ್ಗಗಳನ್ನೂ ಅನುಸರಿಸುವಂತೆ ಅದು ವ್ಯಾಪಾರಿಗಳನ್ನು ಬಲವಂತ ಪಡಿಸುತ್ತದೆ. ಇದನ್ನು ಕೂಡಾ ನಾವು ಈಗಾಗಲೇ ವಿವರಿಸಿದ್ದೇವೆ.

5. ಬಂಡವಾಳಿಗರು ದೀರ್ಘಾವಧಿಗೆ ಸಾಲ ನೀಡಲು ಹಿಂಜರಿಯುತ್ತಾರೆ. ಏಕೆಂದರೆ ಸಟ್ಟಾ ವ್ಯಾಪಾರಕ್ಕಾಗಿ ಸದಾ ತಮ್ಮ ಬಳಿ ಸಾಕಷ್ಟು ನಗದು ಬಂಡವಾಳವನ್ನು ಅವರು ಇರಿಸಬಯಸುತ್ತಾರೆ. ಈಗ ಕಡಿಮೆ ದರದಲ್ಲಿ ಸಾಲ ಕೊಟ್ಟು ಮುಂದೆ ಬಡ್ಡಿ ದರವು ಏರಿದಾಗ ನಮಗೆ ನಷ್ಟವಾಗಬಹುದೆಂದೂ ಅವರು ಭಯಪಡುತ್ತಾರೆ. ಇದರ ಪರಿಣಾಮವೇನಾಗುತ್ತದೆಂದರೆ ಕೈಗಾರಿಕೋದ್ಯಮಿಗಳು ಕೂಡಾ ತಮ್ಮ ಎಲ್ಲ ವಹಿವಾಟುಗಳಲ್ಲಿ ಸಂಕುಚಿತ ದೃಷ್ಟಿಕೋನವನ್ನೇ ಇರಿಸಿಕೊಂಡಿರುತ್ತಾರೆ. ಖಾಯಂ ಪ್ರಗತಿಯ ಯಾವ ಕಾರ್ಯವನ್ನೂ ಕೈಗೆತ್ತಿಕೊಳ್ಳದೆ ಚಾಲೂ ವ್ಯಾಪಾರಗಳಲ್ಲೇ ತೊಡಗಿರುತ್ತಾರೆ. ಇಂತಹ ಅಲ್ಪಾವಧಿ ಸಾಲಗಳನ್ನು ಪಡೆದು ಅತ್ಯಾಧುನಿಕ ಯಂತ್ರೋಪಕರಣಗಳನ್ನು ಖರೀದಿಸಲು ದೊಡ್ಡ ಮೊತ್ತಗಳನ್ನು ಹೂಡುವುದು ಅವರಿಗೆ ಕಷ್ಟವಾಗುತ್ತದೆ. ಆದ್ದರಿಂದ ಅವರು ಹಳೆಯ ಯಂತ್ರೋಪಕರಣಗಳನ್ನೇ ಬಳಸಿ ಕಳಪೆ ಉತ್ಪಾದನೆಯನ್ನು ಮಾರುಕಟ್ಟೆಗೆ ಹಾಕಬೇಕಾಗುತ್ತದೆ. ಅದರಿಂದಲೇ ಅವರು ಸಾಲ, ಬಡ್ಡಿ ಮತ್ತು ತಮಗಾಗಿ ಒಂದಿಷ್ಟು ಲಾಭವನ್ನು ಗಳಿಸಬೇಕಾಗಿದೆ. ಈ ಅಲ್ಪಾವಧಿ ಸಾಲಗಳಿಂದಾಗಿ ಮಾರುಕಟ್ಟೆಯಲ್ಲಿ ಸರಕಿನ ಬೇಡಿಕೆ ಕಡಿಮೆಯಾದ ಕೂಡಲೇ ಉದ್ಯಮಿಯು ತನ್ನ ಉತ್ಪಾದನೆಯನ್ನು ಕಡಿತಗೊಳಿಸುತ್ತಾನೆ. ಸ್ವಲ್ಪ ಸಮಯದ ಮಟ್ಟಿಗಾದರೂ ಅವನು ತನ್ನ ಉತ್ಪಾದನೆಯ ಗತಿಯನ್ನು ಯಥಾಸ್ಥಿತಿಯಲ್ಲಿಡುವ ಧೈರ್ಯ ತೋರಿಸುವುದಿಲ್ಲ. ಏಕೆಂದರೆ ಪೇಟೆಯಲ್ಲಿ ಸರಕಿನ ಬೆಲೆ ಕಡಿಮೆಯಾದರೆ ಆತನಿಗೆ ದಿವಾಳಿಯಾಗುವ ಭಯವಿರುತ್ತದೆ.

6. ದೊಡ್ಡ ಕೈಗಾರಿಕೋದ್ಯಮಗಳಿಗೆ ದೀರ್ಘಾವಧಿಗಾಗಿ ಸಿಗುವ ಸಾಲದ ಮೇಲೆ ಒಂದು ನಿಶ್ಚಿತ ದರದ ಬಡ್ಡಿಯನ್ನು ಹೇರುವುದರಿಂದ ದೊಡ್ಡ ನಷ್ಟಗಳಾಗುತ್ತವೆ. ಇಂತಹ ಸಾಲಗಳನ್ನು ಹೆಚ್ಚಾಗಿ ಹತ್ತು, ಇಪ್ಪತ್ತು ಅಥವಾ ಮೂವತ್ತು ವರ್ಷಗಳಿಗಾಗಿ ಪಡೆಯಲಾಗುತ್ತದೆ. ಆರಂಭದಲ್ಲೇ ಈ ಇಡೀ ಅವಧಿಗಾಗಿ ಒಂದು ವಾರ್ಷಿಕ ಬಡ್ಡಿ ದರವು ನಿಶ್ಚಿತವಾಗುತ್ತದೆ. ಈ ದರವನ್ನು ನಿಶ್ಚಯಿಸುವಾಗ ಮುಂದಿನ ಹತ್ತಿಪ್ಪತ್ತು ಅಥವಾ ಮೂವತ್ತು ವರ್ಷಗಳಲ್ಲಿ ಬೆಲೆಗಳ ಏರಿಳಿತವು ಯಾವ ರೂಪದಲ್ಲಿರುವುದು, ಸಾಲ ಪಡೆದಾತನಿಗೆ ಲಾಭದ ನಿರೀಕ್ಷೆಯು ಎಷ್ಟರ ಮಟ್ಟಿಗಿದೆ ಮತ್ತು ಲಾಭ ಇರುವುದೇ ಇಲ್ಲವೇ ಎಂಬುದನ್ನು ಅಂದಾಜಿಸಲಾಗುವುದಿಲ್ಲ. ಇಬ್ಬರಿಗೂ ಪರೋಕ್ಷ ಜ್ಞಾನವಿಲ್ಲದೆ ಹಾಗೆ ಮಾಡುವುದು ಸಾಧ್ಯವೂ ಇಲ್ಲ. ಉದಾಹರಣೆಗೆ 1949ರಲ್ಲಿ ಒಬ್ಬನು 20 ವರ್ಷಗಳಿಗಾಗಿ ಶೇಕಡಾ 10ರ ಬಡ್ಡಿ ದರದಲ್ಲಿ ಒಂದು ದೊಡ್ಡ ಮೊತ್ತವನ್ನು ಸಾಲ ಪಡೆದು ಯಾವುದಾದರೂ ದೊಡ್ಡ ಯೋಜನೆ ಆರಂಭಿಸಿದನು. ಆತ 1969ರ ತನಕ ಪ್ರತಿ ವರ್ಷ ಸಾಲದ ಕಂತು ಮತ್ತು 1949ರ ನಿಶ್ಚಿತವಾದ ಆ ದರದಲ್ಲಿ ಅದರ ಬಡ್ಡಿಯನ್ನು

ನೀಡುತ್ತಿರಬೇಕು. ಆದರೆ 1955ಕ್ಕೆ ತಲಪುವಷ್ಟರಲ್ಲಿ ಬೆಲೆಗಳು ಕುಸಿಯುತ್ತಾ 1949ರ ಬೆಲೆಯ ಅರ್ಧಾಂಶಕ್ಕೆ ತಲುಪುತ್ತವೆ. ಇದರ ಅರ್ಥವೇನಾಗುತ್ತದೆಂದರೆ 1949ರ ತುಲನೆಯಲ್ಲಿ ದುಪ್ಪಟ್ಟು ಮಾಲು ವಿಕ್ರಯಿಸಬೇಕು. ಅನ್ಯಥಾ ಅವನು ಆ ಸಾಲದ ಬಡ್ಡಿಯನ್ನಾಗಲಿ, ಕಂತನ್ನಾಗಲಿ ಪಾವತಿಸಲಾರನು. ಇದರ ಪರಿಣಾಮವಾಗಿ ಅಂತಹ ಅನೇಕ ಸಾಲಗಾರರು ದಿವಾಳಿಯಾಗುತ್ತಾರೆ ಅಥವಾ ಅವರು ಅದರಿಂದ ಬಚಾವಾಗಲಿಕ್ಕಾಗಿ ಆರ್ಥಿಕ ವ್ಯವಸ್ಥೆಯನ್ನು ಕೆಡಿಸುವಂತಹ ಯಾವುದಾದರೂ ಅಕ್ರಮ ವ್ಯವಹಾರದಲ್ಲಿ ತೊಡಗುತ್ತಾರೆ. ಈ ವಿಷಯದ ಬಗ್ಗೆ ಚಿಂತಿಸುವ ಪ್ರತಿಯೊಬ್ಬ ವಿವೇಕಮತಿಯು ವಿಭಿನ್ನ ಕಾಲಗಳಲ್ಲಿ ಏರುತ್ತಾ ಕುಸಿಯುತ್ತಾ ಇರುವ ಬೆಲೆಗಳ ಮಧ್ಯೆ ವರ್ಷಗಟ್ಟಲೆ ಒಂದೇ ದರದ ಬಡ್ಡಿಯು ನ್ಯಾಯವಾಗಲಿ, ಆರ್ಥಿಕ ಸಿದ್ಧಾಂತಗಳ ಆಧಾರದಲ್ಲಿ ಸಮರ್ಥನೀಯವಾಗಲಿ, ಸಾಮಾಜಿಕ ಪ್ರಗತಿಗೆ ಪೂರಕವಾಗಲಿ ಖಂಡಿತ ಅಲ್ಲವೆಂಬುದನ್ನು ಮನಗಾಣುವನು. ಲೋಕದಲ್ಲಿ ಎಲ್ಲಾದರೂ ಯಾವುದಾದರೂ ಸಂಸ್ಥೆ ಮುಂದಿನ ಮೂವತ್ತು ವರ್ಷಗಳಿಗೆ ಒಂದು ವಸ್ತುವನ್ನು ಇಂದು ನಿರ್ಣಯಿಸಿದ ದರದಲ್ಲಿ ಒದಗಿಸುವ ಗುತ್ತಿಗೆ ವಹಿಸಿಕೊಂಡ ಬಗ್ಗೆ ನೀವು ಕೇಳಿರುವಿರಾ? ಇಷ್ಟು ದೀರ್ಘ ಅವಧಿಯ ವ್ಯವಹಾರದಲ್ಲಿ ಇದು ಅಸಾಧ್ಯವೆಂದಾದರೆ ಕೇವಲ ಬಡ್ಡಿಗೆ ಸಾಲ ನೀಡುವ ಸಾಹುಕಾರನಿಗೆ ಮಾತ್ರ ವರ್ಷಗಟ್ಟಲೆಗೆ ಒಂದು ಬಡ್ಡಿ ದರವನ್ನು ನಿಶ್ಚಯಿಸುವ ಮತ್ತು ಅದರಂತೆ ವಸೂಲಿ ಮಾಡುತ್ತಿರುವ ಪರವಾನಿಗೆ ಇರುವುದು ಸರಿಯೇ?

## ಸರಕಾರಗಳ ರಾಷ್ಟ್ರೀಯ ಸಾಲ

ಇನ್ನು ಸರಕಾರಗಳು ತಮ್ಮ ಆವಶ್ಯಕತೆಗಳಿಗಾಗಿ ತಮ್ಮದೇ ದೇಶದ ಪ್ರಜೆಗಳಿಂದ ಪಡೆಯುವ ಸಾಲದ ಕುರಿತು ಅವಲೋಕಿಸೋಣ. ಅವುಗಳ ಪೈಕಿ ಒಂದು ವಿಧದ ಸಾಲವು ಲಾಭದಾಯಕವಲ್ಲದ ಕಾರ್ಯಗಳಿಗಾಗಿ ವಿನಿಯೋಗಿಸಲ್ಪಡುತ್ತದೆ.

ಈ ರೀತಿಯ ಸಾಲದ ಮೇಲೆ ಬಡ್ಡಿಯ ಸ್ವರೂಪವು ವ್ಯಕ್ತಿಗಳ ಖಾಸಗಿ ಅಗತ್ಯಗಳಿಗಾಗಿ ಪಡೆಯುವ ಸಾಲದ ಮೇಲಿನ ಬಡ್ಡಿಯಂತೆಯೇ ಇದೆ. ವಾಸ್ತವದಲ್ಲಿ ಇದು ಅದಕ್ಕಿಂತಲೂ ಕೆಟ್ಟದಾಗಿದೆ. ಇದರ ಅರ್ಥವೇನಾಗುತ್ತದೆಂದರೆ ಒಬ್ಬ ವ್ಯಕ್ತಿಗೆ ಯಾವ ಸಮಾಜವು ಜನ್ಮ ನೀಡಿದೆಯೋ ಪಾಲನೆ-ಪೋಷಣೆ ಮಾಡಿ ದುಡಿಯುವ ಮತ್ತು ಸಂಪಾದಿಸುವ ಸ್ಥಿತಿಗೆ ಅವನನ್ನು ತಂದಿದೆಯೋ, ಅಪಾಯಗಳಿಂದ ಅವನನ್ನು ರಕ್ಷಿಸಿದೆಯೋ ಹಾಗೂ ಯಾವ ಸಮಾಜದ ನಾಗರಿಕ, ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಯು ಅವನಿಗೆ ಶಾಂತಿಯಿಂದ ತನ್ನ ವ್ಯಾಪಾರ ನಡೆಸುತ್ತಿರಲು ಬೇಕಾದಂತಹ ಎಲ್ಲ ಸೇವೆಗಳ ವ್ಯವಸ್ಥೆ ಮಾಡಿದೆಯೋ ಅದೇ ಸಮಾಜಕ್ಕೆ ಅದರ ಅಗತ್ಯದ ಸಂದರ್ಭದಲ್ಲಿ ಯಾವುದೇ ಆರ್ಥಿಕ ಲಾಭವಿಲ್ಲದ, ಅವನಿಗೂ ಉಪಯುಕ್ತವಾಗುವ ಕಾರ್ಯಕ್ಕಾಗಿ ಬಡ್ಡಿಯಿಲ್ಲದೆ ಸಾಲ ನೀಡಲು ಸಿದ್ಧನಾಗುವುದಿಲ್ಲ. ಆತ ತನ್ನನ್ನು ಪರಿಪಾಲಿಸಿದ ಸಮಾಜವನ್ನು ಉದ್ದೇಶಿಸಿ ನಿನಗೆ ಈ ಹಣದಿಂದ ಲಾಭವಾಗಲಿ ಆಗದಿರಲಿ ನಾನಂತೂ ಇದರ ಮೇಲೆ ಇಂತಿಷ್ಟು ಶೇಕಡಾ ಬಡ್ಡಿಯನ್ನು ಪಡೆದೇ ತೀರುವೆನು ಎನ್ನುತ್ತಾನೆ.

ದೇಶಕ್ಕೆ ಯುದ್ಧವು ಎದುರಾಗಿರುವಾಗ ಈ ವಿಷಯವು ಮತ್ತಷ್ಟು ಗಂಭೀರವಾಗುತ್ತದೆ. ಆಗ ಎಲ್ಲರ ಜತೆ ಆ ಬಂಡವಾಳಿಗನಿಗೂ ತನ್ನ ಪ್ರಾಣ, ಮಾನ ಮತ್ತು ಸೊತ್ತಿನ ಸಂರಕ್ಷಣೆಯ ಸಮಸ್ಯೆ ಮುಂದಾಗುತ್ತದೆ. ಇಂತಹ ಸಂದರ್ಭದಲ್ಲಿ ಸರಕಾರೀ ಬೊಕ್ಕಸದಿಂದ ಖರ್ಚಾಗುವುದೆಲ್ಲವೂ ಯಾವುದೇ ವ್ಯಾಪಾರದಲ್ಲಿ ತೊಡಗದೆ ಯುದ್ಧದ ಬೆಂಕಿಗೆ ಹಾಕಲ್ಪಡುತ್ತದೆ. ಅದರಲ್ಲಿ ಲಾಭದ ಪ್ರಶ್ನೆಯೇ ಇಲ್ಲ. ಈ ಖರ್ಚು ಇಡೀ ದೇಶದ ಜತೆಗೆ ಸ್ವತಃ ಆ ವ್ಯಕ್ತಿಯ ಜೀವನ್ಮರಣದ ಪ್ರಶ್ನೆಯಾಗಿದೆ. ಅದರ ವಿಜಯದ ಮೇಲೆ ಅವನ ಜೀವನ ಅವಲಂಬಿಸಿರುತ್ತದೆ. ಈ ಕಾರ್ಯದಲ್ಲಿ ಇತರ ದೇಶವಾಸಿಗಳೂ ತಮ್ಮ ಪ್ರಾಣ, ಸಮಯ ಮತ್ತು ಶ್ರಮವನ್ನು ವ್ಯಯಿಸುತ್ತಿರುತ್ತಾರೆ. ಅವರ ಪೈಕಿ ಯಾರೂ ನಾನು ದೇಶದ ರಕ್ಷಣೆಗಾಗಿ ವಹಿಸುತ್ತಿರುವ ಪಾತ್ರಕ್ಕಾಗಿ ನನಗೆ ವಾರ್ಷಿಕ ಎಷ್ಟು ಲಾಭ ಸಿಗುತ್ತಿರಬಹುದೆಂದು ಪ್ರಶ್ನಿಸು ವುದಿಲ್ಲ. ಆದರೆ ಇಡೀ ದೇಶದಲ್ಲಿ ಒಬ್ಬ ಬಂಡವಾಳಿಗನು ಮಾತ್ರ ತನ್ನ ಹಣವನ್ನು ನೀಡು ವುದಕ್ಕೆ ಮುಂಚೆ ನನಗೆ ವಾರ್ಷಿಕ ಇಂತಿಷ್ಟು ದರದಲ್ಲಿ ಬಡ್ಡಿ ಸಿಗುತ್ತಿರಬೇಕೆಂಬ ನಿಬಂಧನೆ ಹೇರುತ್ತಾನೆ. ಇಡೀ ರಾಷ್ಟ್ರವು ಸೇರಿ ನನ್ನ ಸಾಲವನ್ನು ತೀರಿಸುವ ತನಕ ನನಗೆ ಆ ಬಡ್ಡಿ ಲಭಿಸುತ್ತಿರಬೇಕೆನ್ನುತ್ತಾನೆ. ಅದಕ್ಕೆ ಒಂದು ಶತಮಾನವೇ ತಗಲಿದರೂ ಸರಿಯೆ. ಯಾರು ದೇಶ ಮತ್ತು ಜನಾಂಗದ ರಕ್ಷಣೆಗಾಗಿ ತಮ್ಮ ಕೈಕಾಲುಗಳನ್ನು, ತಮ್ಮ ತಂದೆ, ಸೋದರ ಅಥವಾ ಪತಿಯನ್ನು ಕಳಕೊಂಡಿರುವರೋ ಅವರ ಕಿಸೆಯಿಂದಲೂ ನನ್ನ ಬಡ್ಡಿಯ ಅಂಶ ಬರಬೇಕು.* ಒಂದು ಸಮಾಜದಲ್ಲಿರುವ ಇಂತಹ ವರ್ಗವನ್ನು ಬಡ್ಡಿ ತಿನ್ನಿಸಿ ಪೋಷಿಸಬೇಕೇ ಅಥವಾ ಅವರಿಗೆ ನಾಯಿಗಳಿಗೆ ಕೊಡುವ ವಿಷದ ಮಾತ್ರೆಗಳನ್ನು ಕೊಟ್ಟು ಸಾಯಿಸಬೇಕೇ ಎಂಬುದು ನಮ್ಮ ಮುಂದಿರುವ ಪ್ರಶ್ನೆಯಾಗಿದೆ.

ಇನ್ನು ಎರಡನೆಯ ವಿಧದ ಸಾಲಗಳ ವಿಷಯ. ಅವು ಸಾಮಾನ್ಯ ವ್ಯಕ್ತಿಗಳು ಮತ್ತು ಸಂಸ್ಥೆಗಳು ವ್ಯಾಪಾರಕ್ಕಾಗಿ ಪಡೆಯುವ ಸಾಲಗಳಿಗಿಂತ ಭಿನ್ನವಲ್ಲ. ಆದ್ದರಿಂದ ನಾವು ವ್ಯಾಪಾರಿ ಸಾಲಗಳ ಬಗ್ಗೆ ಎತ್ತಿರುವ ಎಲ್ಲಾ ಆಕ್ಷೇಪಗಳು ಅದಕ್ಕೂ ಅನ್ವಯಿಸುತ್ತದೆ. ಸಾಮಾನ್ಯವಾಗಿ ಸರಕಾರಗಳು ಲಾಭದಾಯಕ ಕಾರ್ಯಗಳಲ್ಲಿ ತೊಡಗಿಸಲಿಕ್ಕಾಗಿ ದೀರ್ಘಾವಧಿಯ ಸಾಲಗಳನ್ನೆತ್ತುತ್ತವೆ. ಆದರೆ ಯಾವ ಸರಕಾರಕ್ಕೆ ಮುಂದಿನ ಇಪ್ಪತ್ತು ಮೂವತ್ತು ವರ್ಷಗಳಲ್ಲಿ ದೇಶದ ಆಂತರಿಕ ಸ್ಥಿತಿ ಮತ್ತು ಅಂತಾರಾಷ್ಟ್ರೀಯ ಸ್ಥಿತಿಗತಿಗಳು ಯಾವ ರೂಪ ತಾಳುವುವು

*ಈ ಸಂದರ್ಭದಲ್ಲಿ ಒಂದು ಸ್ವಾರಸ್ಯಕರ ವಿಷಯವನ್ನು ತಿಳಿದಿರುವುದು ಒಳ್ಳೆಯದು. ಬ್ರಿಟನ್‌ನ ಪ್ರಜೆಗಳು 125 ವರ್ಷಗಳ ಹಿಂದೆ ತಮ್ಮ ಹಿರಿಯರು ನೆಪೋಲಿಯನ್‌ನ ವಿರುದ್ಧ ಯುದ್ಧಕ್ಕಾಗಿ ಬಂಡವಾಳಶಾಹಿಗಳಿಂದ ಪಡೆದಿದ್ದ ಸಾಲದ ಬಡ್ಡಿಯನ್ನು ಈಗಲೂ ಪಾವತಿ ಮಾಡುತ್ತಲಿದ್ದಾರೆ. 1861ರಿಂದ 65ರ ತನಕ ಅಮೇರಿಕಾದ ಗೃಹ ಯುದ್ಧದ ಸಂದರ್ಭದಲ್ಲಿ ಅದರ ಖರ್ಚಿಗಾಗಿ ಪಡೆದ ಸಾಲದ ನಾಲ್ಕು ಪಟ್ಟನ್ನು ಅಮೇರಿಕನ್ ಪ್ರಜೆಗಳು ಈ ತನಕ ಸಂದಾಯ ಮಾಡಿರುವರು. ಈಗಲೂ ಅವರ ಮೇಲೆ ಒಂದು ಶತಕೋಟಿ ಡಾಲರ್‌ನಷ್ಟು ಸಾಲ ಮತ್ತು ಬಡ್ಡಿ ಸಂದಾಯ ಮಾಡಲು ಬಾಕಿ ಇದೆ.

ಎಂದಾಗಲಿ ಅದರಲ್ಲಿ ತಾನು ಒಂದು ನಿಶ್ಚಿತ ಬಡ್ಡಿ ದರದ ಮೇಲೆ ಸಾಲ ಪಡೆದು ತೊಡಗಿದ ಬಂಡವಾಳ ಎಷ್ಟು ಲಾಭ ತರಬಲ್ಲುದೆಂದಾಗಲಿ ತಿಳಿದಿರುವುದು ಸಾಧ್ಯವೇ ಇಲ್ಲ. ಹೆಚ್ಚಿನ ವೇಳೆ ಸರಕಾರದ ಅಂದಾಜುಗಳು ತಪ್ಪಾಗುತ್ತವೆ. ಅದು ಕೈಗೆತ್ತಿಕೊಂಡ ಕಾರ್ಯವು ಬಡ್ಡಿ ದರಕ್ಕಿಂತ ಹೆಚ್ಚು ಲಾಭ ಗಳಿಸುವುದಂತಿರಲಿ ಬಡ್ಡಿ ದರದಷ್ಟಾದರೂ ಲಾಭ ತರುವುದಿಲ್ಲ. ಸರಕಾರಗಳು ಆರ್ಥಿಕ ಸಂಕಷ್ಟಗಳಲ್ಲಿ ಸಿಲುಕಲು ಇದು ಒಂದು ದೊಡ್ಡ ಕಾರಣವಾಗಿದೆ. ಅವುಗಳಿಗೆ ತಮ್ಮ ಹಿಂದಿನ ಸಾಲದ ಅಸಲು ಮತ್ತು ಬಡ್ಡಿ ಪಾವತಿ ಮಾಡುವುದೇ ಕಷ್ಟವಾಗಿರುವಾಗ ಇನ್ನಷ್ಟು ಪ್ರಗತಿಯ ಕಾರ್ಯಗಳಿಗೆ ಅದು ಸಾಲ ಪಡೆದು ಬಂಡವಾಳ ಹೂಡುವ ಸ್ಥಿತಿಯಲ್ಲಿರುವುದಿಲ್ಲ.

ಅದಲ್ಲದೆ ಇಲ್ಲಿಯೂ ನಾವು ಈ ಮೊದಲು ಸೂಚಿಸಿದಂತಹ ಸ್ಥಿತಿಯೇ ಉಂಟಾಗುತ್ತದೆ. ಮಾರುಕಟ್ಟೆಯ ಬಡ್ಡಿ ದರವು ಒಂದು ಸೀಮೆಯನ್ನು ನಿಶ್ಚಯಿಸುತ್ತದೆ. ಅದಕ್ಕಿಂತ ಕಡಿಮೆ ಆದಾಯವಿರುವ ಯಾವುದೇ ಕಾರ್ಯಕ್ಕೆ ಅದು ಸಾರ್ವಜನಿಕರಿಗೆ ಎಷ್ಟೇ ಅಗತ್ಯ ಮತ್ತು ಲಾಭದಾಯಕವಾಗಿದ್ದರೂ ಸರಿಯೆ ಬಂಡವಾಳವನ್ನು ಹೂಡುವುದು ಸಾಧ್ಯವಲ್ಲ. ಬಂಜರು ಭೂಮಿಯ ಅಭಿವೃದ್ಧಿ, ನೀರಿಲ್ಲದ ನೆಲಕ್ಕೆ ನೀರಾವರಿಯ ವ್ಯವಸ್ಥೆ, ಹಳ್ಳಿಗಳಲ್ಲಿ ರಸ್ತೆ, ವಿದ್ಯುದ್ದೀಪ ಮತ್ತು ಆರೋಗ್ಯ ಸೇವೆಗಳ ಏರ್ಪಾಡು, ಕಡಿಮೆ ಆದಾಯದ ಜನರಿಗೆ ಗೃಹ ನಿರ್ಮಾಣ ಇತ್ಯಾದಿ ಕೆಲಸಗಳು ಎಷ್ಟೇ ಮಹತ್ವದ್ದಾಗಿದ್ದರೂ ಅದು ಆಗದೆ ಹೋದರೆ ದೇಶಕ್ಕೆ ಎಷ್ಟೇ ದೊಡ್ಡ ನಷ್ಟವಾಗುವುದಿದ್ದರೂ ಸರಕಾರವು ಅವುಗಳಿಗಾಗಿ ಹಣ ವಿನಿಯೋಗಿಸುವಂತಿಲ್ಲ. ಏಕೆಂದರೆ ಅದರಿಂದ ಪ್ರಚಲಿತ ಬಡ್ಡಿ ದರದ ಪ್ರಮಾಣದಲ್ಲಿ ಲಾಭ ಗಳಿಸುವುದು ಸಾಧ್ಯವಿಲ್ಲ.

ಇನ್ನು ಯಾವ ಕೆಲಸಗಳಿಗಾಗಿ ಸರಕಾರವು ಬಡ್ಡಿಯ ಸಾಲವೆತ್ತಿ ಬಂಡವಾಳ ಹೂಡುತ್ತದೋ ಅದರಲ್ಲೂ ವಸ್ತುಶಃ ಬಡ್ಡಿಯ ಭಾರವನ್ನು ಸಾರ್ವಜನಿಕರ ಮೇಲೆಯೇ ಹೇರಲಾಗುತ್ತದೆ. ಕರಗಳ ರೂಪದಲ್ಲಿ ಈ ಬಡ್ಡಿಯನ್ನು ಪ್ರತಿಯೊಬ್ಬ ಪ್ರಜೆಯಿಂದ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ವಸೂಲಿ ಮಾಡಲಾಗುತ್ತದೆ. ಹೀಗೆ ಪ್ರತಿ ವರ್ಷ ಲಕ್ಷಗಟ್ಟಲೆ ರೂಪಾಯಿ ಶೇಖರಿಸಿ ಬಂಡವಾಳಶಾಹಿಗಳಿಗೆ ಕೊಡಲಾಗುತ್ತದೆ. ಉದಾ: ಇಂದು 5 ಕೋಟಿಯ ಬಂಡವಾಳದಿಂದ ನೀರಾವರಿಯ ಒಂದು ಯೋಜನೆ ಜಾರಿಗೆ ಬಂತೆಂದಿಟ್ಟುಕೊಳ್ಳಿ. ಈ ಬಂಡವಾಳವನ್ನು ಶೇಕಡಾ 6ರ ಬಡ್ಡಿ ದರದಲ್ಲಿ ಗಳಿಸಲಾಗಿದೆ. ಇದರಿಂದ ಸರಕಾರವು ಪ್ರತಿ ವರ್ಷ 30 ಲಕ್ಷ ರೂಪಾಯಿ ಬಡ್ಡಿ ತೆರಬೇಕಾಗುತ್ತದೆ. ಸರಕಾರಕ್ಕೆ ಈ ಹಣ ಎಲ್ಲಿಂದ ಬರಬೇಕು? ಅದು ನೀರಾವರಿಯ ಪ್ರಯೋಜನ ಪಡೆಯುವ ಪ್ರತಿಯೊಬ್ಬ ರೈತನ ಮೇಲೆ ಕರ ವಿಧಿಸುತ್ತದೆ. ಅದರಲ್ಲಿ ಒಂದಂಶ ಈ ಬಡ್ಡಿಯದ್ದೂ ಸೇರಿರುತ್ತದೆ. ರೈತನು ಕೂಡಾ ಈ ಬಡ್ಡಿಯನ್ನು ತನ್ನ ಕಿಸೆಯಿಂದ ನೀಡುವುದಿಲ್ಲ. ಅವನು ಅದನ್ನು ತಾನು ಉತ್ಪಾದಿಸುವ ದವಸ ಧಾನ್ಯಗಳ ಮೇಲೆ ಹೇರುತ್ತಾನೆ. ಈ ರೀತಿ ಪ್ರತಿಯೊಬ್ಬ ಬಳಕೆದಾರನೂ ಈ ಬಡ್ಡಿಯ ಹಣವನ್ನು ಪರೋಕ್ಷವಾಗಿ ಸಂದಾಯ ಮಾಡುತ್ತಾನೆ. ಪ್ರತಿಯೊಬ್ಬ ಹಸಿದ

ವ್ಯಕ್ತಿಯ ರೊಟ್ಟಿಯ ಒಂದೊಂದು ತುಂಡನ್ನು ಕಸಿದು ಆ ಯೋಜನೆಗೆ ಸಾಲ ನೀಡಿದ ಬಂಡವಾಳಶಾಹಿಗಳ ಹೊಟ್ಟೆ ತುಂಬಲಾಗುತ್ತದೆ. ಸರಕಾರವು ಈ ಸಾಲ ಸಂದಾಯ ಮಾಡಲು 50 ವರ್ಷ ತೆಗೆದುಕೊಂಡರೆ ಬಡವರ ಕೂಳಿನಿಂದ ತುತ್ತು ಕಸಿಯುವ ಈ ಕಾಯಕವು ಅರ್ಧ ಶತಮಾನದ ತನಕ ನಡೆಯುತ್ತಿರುತ್ತದೆ. ಈ ವ್ಯವಹಾರದಲ್ಲಿ ಸರಕಾರದ ನೆಲೆಯು ಆ ಬಂಡವಾಳಶಾಹಿಗಳ ಗುಮಾಸ್ತನಿಗಿಂತ ಭಿನ್ನವಾಗಿರುವುದಿಲ್ಲ.

ಈ ಪ್ರಕ್ರಿಯೆಯು ಸಾಮೂಹಿಕ ಆರ್ಥಿಕತೆಯಲ್ಲಿ ಸಂಪತ್ತನ್ನು ಬಡವರಿಂದ ಧನಿಕರ ಕಡೆಗೆ ಹರಿಸುತ್ತದೆ. ನಿಜವಾಗಿ ಸಾಮಾಜಿಕ ಹಿತದ ಬೇಡಿಕೆಯಂತೆ ಸಂಪತ್ತು ಧನಿಕರಿಂದ ಬಡವರ ಕಡೆಗೆ ಹರಿಯಬೇಕಾಗಿತ್ತು. ಕೇವಲ ಸರಕಾರಗಳು ಲಾಭದಾಯಕ ಸಾಲಗಳ ಮೇಲೆ ತೆರುವ ಬಡ್ಡಿಯಲ್ಲಿ ಮಾತ್ರ ಈ ಕೆಡುಕು ಇರುವುದಲ್ಲ. ಎಲ್ಲ ವ್ಯಾಪಾರಿಗಳು ಮಾಡುವ ಎಲ್ಲ ಬಡ್ಡಿ ವ್ಯವಹಾರಗಳಲ್ಲಿಯೂ ಈ ಕೆಡುಕು ಇದೆ. ಯಾವನೇ ವ್ಯಾಪಾರಿ, ಉದ್ಯಮಿ ಅಥವಾ ರೈತನು ತನ್ನ ಜೇಬಿನಿಂದ ಬಂಡವಾಳಿಗನಿಗೆ ಬಡ್ಡಿ ನೀಡುವುದಿಲ್ಲ. ಅವರೆಲ್ಲರೂ ಈ ಹೊರೆಯನ್ನು ಸರಕಿನ ಬೆಲೆಯ ಮೇಲೆ ಹೇರುತ್ತಾರೆ. ಈ ರೀತಿ ಅವರು ಸಾರ್ವಜನಿಕರಿಂದ ಚಂದಾ ಸಂಗ್ರಹಿಸಿ ಲಕ್ಷಾಧೀಶರೂ ಕೋಟ್ಯಾಧೀಶರೂ ಆದ ಬಂಡವಾಳಿಗರ ತಿಜೋರಿಯನ್ನು ತುಂಬುತ್ತಿರುತ್ತಾರೆ. ಈ ಕುರುಡು ವ್ಯವಸ್ಥೆಯಲ್ಲಿ ಅತ್ಯಧಿಕ 'ಸಹಾಯ'ಕ್ಕೆ ಅರ್ಹನಾದವನು ದೇಶದ ಅತಿ ದೊಡ್ಡ ಧನಿಕನಾಗಿದ್ದಾನೆ. ಆ 'ಸಹಾಯ' ಮಾಡುವ ಹೊಣೆ ಯಾರ ಮೇಲೆ ಬೀಳುತ್ತದೋ ಅವನು ತನ್ನ ಬೆವರು- ನೆತ್ತರನ್ನು ಹರಿಸಿ ದಿನ ಪೂರ್ತಿ ದುಡಿದು ತಂದು ತನ್ನ ಹಸಿದ ಮಕ್ಕಳು-ಮರಿಗಳಿಗೆ ರೊಟ್ಟಿ-ಚಟ್ನಿ ನೀಡುವ ಮೊದಲು ಅದರ ಒಂದು ಪಾಲನ್ನು ತನ್ನ ದೇಶದ ಅತ್ಯಧಿಕ 'ಕರುಣೆಗೆ ಪಾತ್ರ'ನಾದ ಕೋಟ್ಯಾಧೀಶನ 'ಹಕ್ಕ'ನ್ನು ನೀಡಬೇಕಾಗುತ್ತದೆ.

## ಸರಕಾರದ ವಿದೇಶಿ ಸಾಲಗಳು

ಸರಕಾರಗಳು ವಿದೇಶಿ ಸಾಹುಕಾರರಿಂದ ಪಡೆಯುವ ಸಾಲವು ಈ ಪೈಕಿ ಕೊನೆಯ ವಿಧವಾಗಿದೆ. ಈ ಸಾಲಗಳು ಸಾಮಾನ್ಯವಾಗಿ ಶತ ಕೋಟಿಗಟ್ಟಲೆ ಮೊತ್ತದ ಸಾಲಗಳಾಗಿರುತ್ತವೆ. ದೇಶವು ಅಸಾಮಾನ್ಯ ಸಂಕಷ್ಟಗಳಲ್ಲಿ ಸಿಲುಕಿದ್ದು ದೇಶದ ಸಂಪನ್ಮೂಲಗಳಿಂದ ಆ ಸಂಕಷ್ಟಗಳನ್ನು ಎದುರಿಸಲು ಸಾಧ್ಯವಿಲ್ಲದ ಸಂದರ್ಭಗಳಲ್ಲಿ ಸರಕಾರಗಳು ಇಂತಹ ಸಾಲವನ್ನು ಎತ್ತುತ್ತವೆ. ಕೆಲವೊಮ್ಮೆ ಬೃಹತ್ ಮೊತ್ತದ ಈ ಸಾಲಗಳ ಮೂಲಕ ದೇಶದ ಸಂಪನ್ಮೂಲಗಳನ್ನು ಅಭಿವೃದ್ಧಿ ಪಡಿಸುವ ಆಶಯದಿಂದಲೂ ಈ ಸಾಲಗಳನ್ನು ಎತ್ತಲಾಗುತ್ತದೆ. ಇಂತಹ ಸಾಲಗಳ ಬಡ್ಡಿ ದರವು 6-7ರಿಂದ 9-10 ಶೇಕಡಾದ ವರೆಗಿರುತ್ತದೆ. ಈ ದರದಲ್ಲಿ ಶತಕೋಟಿಗಟ್ಟಲೆ ರೂಪಾಯಿಯ ಬಡ್ಡಿಯ ಮೊತ್ತವು ಕೋಟಿಗಟ್ಟಲೆ ರೂಪಾಯಿಯಾಗುತ್ತದೆ. ಅಂತಾರಾಷ್ಟ್ರೀಯ ಹಣಕಾಸು ಮಾರುಕಟ್ಟೆಯ ಸಾಹುಕಾರರು ತಂತಮ್ಮ ಸರಕಾರಗಳನ್ನು ಮಧ್ಯವರ್ತಿಯಾಗಿ ಮಾಡಿ ಈ ಸಾಲಗಳನ್ನು ನೀಡುತ್ತಾರೆ. ಇದಕ್ಕೆ ಜಾಮೀನಿನ ರೂಪದಲ್ಲಿ

ಸಾಲ ಪಡೆಯುವ ಸರಕಾರದ ಆದಾಯಗಳ ಪೈಕಿ ಯಾವುದಾದರೊಂದು ಆದಾಯ ಮೂಲವನ್ನು ಗಿರವಿ ಇಡುತ್ತಾರೆ. ಉದಾ: ಮಾರಾಟ ತೆರಿಗೆ, ಅಬಕಾರಿ ಸುಂಕ ಇತ್ಯಾದಿ.

ಈ ವಿಧದ ಬಡ್ಡಿಯ ಸಾಲದಲ್ಲೂ ನಾವು ಹಿಂದೆ ವಿವರಿಸಿರುವ ಎಲ್ಲ ರೀತಿಯ ಕೆಡುಕುಗಳೂ ಇವೆ. ವೈಯಕ್ತಿಕ ಸಾಲ, ವ್ಯಾಪಾರೀ ಸಾಲ, ಸರಕಾರೀ ಸಾಲಗಳಲ್ಲಿರುವ ಯಾವುದೇ ಕೆಡುಕು ಈ ಅಂತಾರಾಷ್ಟ್ರೀಯ ಸಾಲಗಳಲ್ಲಿ ಇಲ್ಲದೇ ಇಲ್ಲ. ಆದ್ದರಿಂದ ಆ ಕೆಡುಕುಗಳನ್ನು ಇಲ್ಲಿ ಪ್ರಸ್ತಾಪಿಸುವ ಅಗತ್ಯವಿಲ್ಲ. ಇಂತಹ ಸಾಲಗಳಲ್ಲಿ ಅವುಗಳಿಗಿಂತ ಭಯಾನಕವಾದಂತಹ ಒಂದು ಕೆಡುಕಿದೆ. ಇಂತಹ ಸಾಲಗಳಿಂದಾಗಿ ಇಡೀ ದೇಶದ ಹಣಕಾಸಿನ ಸ್ಥಿತಿಯು ಕೆಡುತ್ತದೆ ಮತ್ತು ಆರ್ಥಿಕ ಸ್ಥಿತಿಯು ವಿನಾಶಕಾರಿಯಾಗುತ್ತದೆ. ಇದರಿಂದ ಇಡೀ ಲೋಕದ ಆರ್ಥಿಕ ಸ್ಥಿತಿಯ ಮೇಲೆ ಅತ್ಯಂತ ಕೆಟ್ಟ ಪರಿಣಾಮ ಬೀಳುತ್ತದೆ. ಇದರಿಂದಾಗಿ ರಾಷ್ಟ್ರಗಳ ಮಧ್ಯೆ ದ್ವೇಷದ ಬೀಜ ಬೀಳುತ್ತದೆ. ಕಟ್ಟಕಡೆಗೆ ಇದರಿಂದಾಗಿ ಸಂಕಷ್ಟಕ್ಕೀಡಾದ ರಾಷ್ಟ್ರದ ಯುವ ಜನರು ಹತಾಶರಾಗಿ ತೀವ್ರವಾದೀ ರಾಜಕೀಯ, ಸಾಂಸ್ಕೃತಿಕ ಮತ್ತು ಆರ್ಥಿಕ ಸಿದ್ಧಾಂತಗಳನ್ನು ಅಳವಡಿಸುತ್ತಾರೆ. ತಮ್ಮ ಸಮಸ್ಯೆಗಳ ಪರಿಹಾರವನ್ನು ಒಂದು ರಕ್ತಸಿಕ್ತ ಕ್ರಾಂತಿಯ ಮೂಲಕ ಅಥವಾ ವಿನಾಶಕಾರಿ ಯುದ್ಧದ ಮೂಲಕ ಹುಡುಕಲು ಪ್ರಯತ್ನಿಸುತ್ತಾರೆ.

ಯಾವ ರಾಷ್ಟ್ರದ ಸಂಪನ್ಮೂಲಗಳು ತನ್ನ ಸಂಕಷ್ಟಗಳನ್ನು ದೂರ ಮಾಡಲು ಅಥವಾ ತನ್ನ ಆವಶ್ಯಕತೆಗಳನ್ನು ಪೂರೈಸಲು ಪರ್ಯಾಪ್ತವಲ್ಲವೋ ಅದು ಪ್ರತಿ ವರ್ಷ 50-60 ಲಕ್ಷ ಅಥವಾ ಎರಡು ಎರಡೂವರೆ ರೂಪಾಯಿಗಳ ಬಡ್ಡಿಯನ್ನೂ ಮೂಲ ಸಾಲದ ಕಂತನ್ನೂ ಪಾವತಿಸಲು ಸಮರ್ಥವಾಗಲಾರದೆಂಬುದು ಸ್ಪಷ್ಟ. ಮೊದಲೇ ನೀವು ಒಂದು ದೊಡ್ಡ ಆದಾಯ ಮೂಲವನ್ನು ಸಾಲದ ಅಡವಿನ ರೂಪದಲ್ಲಿ ಅಡವಿಟ್ಟುಕೊಂಡು ಅದರ ಸಂಪನ್ಮೂಲಗಳನ್ನು ಸೀಮಿತಗೊಳಿಸುತ್ತೀರಿ. ಆದ್ದರಿಂದ ಒಂದು ರಾಷ್ಟ್ರವು ಈ ರೀತಿ ದೊಡ್ಡ ಮೊತ್ತವನ್ನು ಬಡ್ಡಿಯ ಸಾಲದ ರೂಪದಲ್ಲಿ ಪಡೆದರೆ ಅದರ ಸಂಕಷ್ಟಗಳು ನಿವಾರಣೆಯಾಗುವುದು ವಿರಳ. ಹೆಚ್ಚಿನ ವೇಳೆ ಈ ಸಾಲಗಳು ದೇಶದ ಸಂಕಷ್ಟಗಳನ್ನು ಹೆಚ್ಚಿಸುತ್ತವೆ. ಸಾಲದ ಬಡ್ಡಿ ಮತ್ತು ಕಂತು ಪಾವತಿ ಮಾಡಲಿಕ್ಕಾಗಿ ತನ್ನ ಪ್ರಜೆಗಳ ಮೇಲೆ ಹೆಚ್ಚಿನ ಕರಗಳನ್ನೂ ಹೇರುತ್ತದೆ. ತನ್ನ ಅಭಿವೃದ್ಧಿ ವೆಚ್ಚಗಳನ್ನು ಕಡಿಮೆ ಮಾಡುತ್ತದೆ. ಇದರಿಂದ ಒಂದೆಡೆ ಪ್ರಜೆಗಳಲ್ಲಿ ಅಸಮಾಧಾನ ಹರಡುತ್ತದೆ. ಏಕೆಂದರೆ ಅವರು ಖರ್ಚು ಮಾಡಿದಷ್ಟು ಅದರ ಪ್ರತಿಫಲ ಅವರಿಗೆ ಸಿಗುವುದಿಲ್ಲ. ಇನ್ನೊಂದೆಡೆ ಜನತೆಯ ಮೇಲೆ ಇಷ್ಟು ದೊಡ್ಡ ಕರಭಾರವನ್ನು ಹೇರಿಯೂ ಸರಕಾರವು ಸಾಲದ ಕಂತು ಮತ್ತು ಬಡ್ಡಿಯನ್ನು ನಿಯಮಿತವಾಗಿ ಪಾವತಿಸಲು ಸಮರ್ಥವಾಗುವುದಿಲ್ಲ. ಇನ್ನು ಸಾಲಗಾರ ದೇಶವು ಪಾವತಿಯಲ್ಲಿ ನಿರಂತರ ತಪ್ಪುತ್ತಲಿದ್ದರೆ ವಿದೇಶಿ ಬಂಡವಾಳಿಗರು ಅದನ್ನು ಮೋಸಗಾರ ದೇಶವೆಂದು ಆರೋಪಿಸುತ್ತಾರೆ. ಅವರ ಸೂಚನೆಯ ಮೇರೆಗೆ ಆ ದೇಶದ ಮಾಧ್ಯಮಗಳು ಆ ಬಡ ದೇಶದ ಮೇಲೆ ಪ್ರಹಾರಗಳನ್ನು

ಮಾಡುತ್ತಿರುತ್ತದೆ. ಆಗ ಆ ದೇಶದ ಸರಕಾರವು ಮಧ್ಯೆ ಬಿದ್ದು ಬಂಡವಾಳಶಾಹಿಗಳ ಪರವಾಗಿ ಅದರ ಮೇಲೆ ರಾಜಕೀಯ ಒತ್ತಡ ಹೇರುತ್ತದೆ, ಮಾತ್ರವಲ್ಲ ಅದರ ಸಂಕಷ್ಟಗಳಿಂದ ದುರ್ಲಾಭ ಪಡೆಯಲು ಪ್ರಯತ್ನಿಸುತ್ತದೆ. ಸಾಲಗಾರ ದೇಶದ ಸರಕಾರವು ಈ ಉರುಳಿನಿಂದ ಹೊರಬರಲು ಪ್ರಯತ್ನಿಸುತ್ತದೆ. ತೆರಿಗೆಗಳನ್ನು ಇನ್ನಷ್ಟು ಹೆಚ್ಚಿಸಿ ಖರ್ಚಿನಲ್ಲಿ ಇನ್ನಷ್ಟು ಕಡಿತ ಮಾಡಿ ಆದಷ್ಟು ಬೇಗ ಅದರಿಂದ ಮುಕ್ತಿ ಪಡೆಯಲು ಯತ್ನಿಸುತ್ತದೆ. ಆದರೆ ಅದರ ಪ್ರಭಾವ ದೇಶದ ಜನತೆಯ ಮೇಲಾಗುತ್ತದೆ. ಏರುತ್ತಿರುವ ಸಾಂಪತ್ತಿಕ ಭಾರ ಹೊತ್ತು, ಆರ್ಥಿಕ ಸಂಕಷ್ಟಗಳನ್ನು ಎದುರಿಸಿ ಅದರ ಸ್ವಭಾವವೇ ಕಹಿಯಾಗಿ ಬಿಡುತ್ತದೆ. ವಿದೇಶಿ ಸಾಲ ನೀಡಿದವರ ಪ್ರಹಾರಗಳು, ರಾಜಕೀಯ ಒತ್ತಡಗಳಿಂದ ಅವರು ಇನ್ನಷ್ಟು ಕೆರಳುತ್ತಾರೆ. ತಮ್ಮ ದೇಶದ ನ್ಯಾಯಪ್ರಿಯ ಮೇಧಾವಿಗಳ ಬಗ್ಗೆ ಕುಪಿತರಾಗುತ್ತಾರೆ. ಅವರು ವ್ಯವಹಾರ ಜ್ಞಾನವುಳ್ಳ ಜನರನ್ನು ಬಿಟ್ಟು ತೀವ್ರವಾದಿ ಜೂಜಾಟಗಾರರನ್ನು ಅನುಸರಿಸುತ್ತಾರೆ. ಅವರು ತಮ್ಮೆಲ್ಲ ಸಾಲಗಳಿಂದ ಹೊಣೆ ಮುಕ್ತರಾಗಿ ರಂಗಕ್ಕಿಳಿದು ತಾಕತ್ತಿದ್ದರೆ ನಮ್ಮಿಂದ ನೀವು ನಿಮ್ಮ ಸಾಲವನ್ನು ವಸೂಲಿ ಮಾಡಿ ನೋಡಿರಿ ಎಂಬ ಪಂಥಾಹ್ವಾನ ಒಡ್ಡುತ್ತಾರೆ.

ಇಲ್ಲಿ ಬಡ್ಡಿಯ ಕಿಡಿಗೇಡಿತನ ಮತ್ತು ಕ್ಷೋಭೆಯು ತನ್ನ ಚರಮ ಸೀಮೆಗೆ ತಲುಪುತ್ತದೆ. ಇನ್ನು ಯಾರಾದರೂ ವಿಚಾರವಂತ ಮತ್ತು ಪ್ರಜ್ಞಾವಂತ ವ್ಯಕ್ತಿ ಬಡ್ಡಿಯು ಅನಿವಾರ್ಯವಾಗಿ ನಿಷೇಧಿಸಲ್ಪಡಬೇಕಾದಂತಹ ಒಂದು ಕೆಡುಕಾಗಿದೆ ಎಂಬುದನ್ನು ಒಪ್ಪಿಕೊಳ್ಳಲು ಹಿಂಜರಿಯ ಬಹುದೇ? ಇದರ ಈ ಹಾನಿ ಮತ್ತು ದುಷ್ಪರಿಣಾಮಗಳನ್ನು ನೋಡಿದ ಬಳಿಕ ಪ್ರವಾದಿ ಮುಹಮ್ಮದ್‌ರವರ(ಸ) ಈ ವಚನದ ಬಗ್ಗೆ ಅವನಲ್ಲಿ ಸಂಶಯ ಮೂಡಲು ಸಾಧ್ಯವೇ?

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಬಡ್ಡಿಯು ಎಷ್ಟು ದೊಡ್ಡ ಅಪರಾಧವಾಗಿದೆಯೆಂದರೆ ಅದನ್ನು ಎಪ್ಪತ್ತು ಭಾಗಗಳಾಗಿ ವಿಂಗಡಿಸಿದರೆ ಅದರ ಒಂದು ಭಾಗವು ಒಬ್ಬ ವ್ಯಕ್ತಿ ತನ್ನ ತಾಯಿಯ ಜತೆ ವ್ಯಭಿಚಾರ ಮಾಡಿದಷ್ಟು ದೊಡ್ಡ ಅಪರಾಧವಾಗಿರುವುದು." (ಇಬ್ನುಮಾಜಃ, ಬೈಹಕಿ)



# ಆಧುನಿಕ ಬ್ಯಾಂಕಿಂಗ್

ಬಡ್ಡಿಯ ಕೇಡಿನ ವಿಷಯ ಇನ್ನೂ ಕೊನೆಗೊಂಡಿಲ್ಲ. ಅದರ ವ್ಯಕ್ತಿಗತ ಕೆಡುಕುಗಳು ಆಧುನಿಕ ಕಾಲದಲ್ಲಿ, ಸಾಹುಕಾರರ ಹಳೆಯ ಪದ್ಧತಿಯು ಆಧುನಿಕ ಬ್ಯಾಂಕಿಂಗ್‌ನ ರೂಪ ತಾಳುವ ಮೂಲಕ ಹಲವು ಪಟ್ಟು ಅಧಿಕಗೊಂಡಿದೆ. ಈ ಸಂಸ್ಥೆಯು ಹಳೆಯ ಸರಾಫರ ಪೀಠದಲ್ಲಿ ಆಧುನಿಕ ಯುಗದ ಬ್ಯಾಂಕರ್ ಮತ್ತು ಫೈನಾನ್ಸಿಯರ್‌ಗಳನ್ನು ತಂದು ಕೂರಿಸಿದೆ. ಬಡ್ಡಿಯ ಅಸ್ತ್ರವು ಅದರ ಕೈಗಳಿಗೆ ಬಂದು ಹಿಂದೆಂದಿಗಿಂತಲೂ ಅಧಿಕ ವಿನಾಶಕಾರಿಯಾಗಿ ಮಾರ್ಪಟ್ಟಿದೆ.

## ಆರಂಭದ ಇತಿಹಾಸ

ಸಾಹುಕಾರತನದ ಈ ಹೊಸ ವ್ಯವಸ್ಥೆಯ ಸ್ವಭಾವವನ್ನು ತಿಳಿಯಲು ಅದರ ಐತಿಹಾಸಿಕ ಹಿನ್ನೆಲೆಯನ್ನು ತಿಳಿಯುವುದು ಅಗತ್ಯವಾಗಿದೆ.

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಅದರ ಆರಂಭ ಹೇಗಾಯಿತೆಂದರೆ ಕಾಗದದ ನೋಟು ಚಲಾವಣೆಯಲ್ಲಿಲ್ಲದ ಕಾಲದಲ್ಲಿ ಜನರು ತಮ್ಮ ಸಂಪತ್ತನ್ನು ಬಂಗಾರದ ರೂಪದಲ್ಲೇ ಶೇಖರಿಸುತ್ತಿದ್ದರು. ಅದನ್ನು ಮನೆಯಲ್ಲಿಡುವ ಬದಲು ಸುರಕ್ಷತೆಗಾಗಿ ಅಕ್ಕಸಾಲಿಗರ ಬಳಿ ಇರಿಸುತ್ತಿದ್ದರು. ಅಕ್ಕಸಾಲಿಗರು ತಮ್ಮ ಬಳಿ ಇರಿಸಲ್ಪಟ್ಟ ಚಿನ್ನದ ರಶೀದಿಯನ್ನು ಬರೆದು ಕೊಡುತ್ತಿದ್ದರು. ಅದರಲ್ಲಿ ಈ ರಶೀದಿ ಹೊಂದಿದವನು ಇಂತಿಷ್ಟು ಚಿನ್ನ ಅಕ್ಕಸಾಲಿಗನ ಬಳಿಯಿದೆ ಎಂದು ಬರೆದಿರುತ್ತಿತ್ತು. ಬರಬರುತ್ತಾ ಈ ರಶೀದಿಗಳು ಸಾಲದ ಪಾವತಿಯಲ್ಲಿ ಕ್ರಯ-ವಿಕ್ರಯದಲ್ಲಿ ಮತ್ತು ಲೆಕ್ಕ ತೀರಿಸಲಿಕ್ಕಾಗಿ ಒಬ್ಬರಿಂದ ಇನ್ನೊಬ್ಬರಿಗೆ ವರ್ಗಾವಣೆಯಾಗಲಾರಂಭಿಸಿತು. ಪ್ರತಿಯೊಂದು ವ್ಯವಹಾರದ ವೇಳೆ ಅಕ್ಕಸಾಲಿಗನಿಂದ ಚಿನ್ನವನ್ನು ತರುವ ಬದಲು ಅದರ ರಶೀದಿಯನ್ನು ಇತರರಿಗೆ ನೀಡುವುದು ಜನರ ಪಾಲಿಗೆ ಸುಲಭವಾಗಿತ್ತು. ವ್ಯಾಪಾರವು ಈ ರಶೀದಿಯಲ್ಲೇ ನಡೆಯತೊಡಗಿತು. ರಶೀದಿಯನ್ನು ಒಬ್ಬನಿಗೆ ಕೊಡುವುದೆಂದರೆ ಚಿನ್ನವನ್ನು ಅವನಿಗೆ ನೀಡಿದಂತೆ ಎಂದು ಪರಿಗಣಿಸಲಾಗುತ್ತಿತ್ತು. ಆದ್ದರಿಂದ ಎಲ್ಲ ವ್ಯಾಪಾರೀ ಉದ್ದೇಶಗಳಿಗೆ ಈ ರಶೀದಿಯು ಚಿನ್ನದ ಬದಲಿ ಎಂಬ ನೆಲೆಯಲ್ಲಿ ಚಲಾವಣೆಗೊಂಡಿತು. ಆ ರಶೀದಿಯಲ್ಲಿರುವಂತಹ ಚಿನ್ನವನ್ನು ಅಕ್ಕಸಾಲಿಗನಿಂದ ಪಡೆಯುವ ಸಂದರ್ಭ ಬರುವುದು ಬಹಳ ವಿರಳವಾಯಿತು. ಯಾರಿಗಾದರೂ ಚಿನ್ನವೇ ಅಗತ್ಯ ಬಿದ್ದಾಗ ಮಾತ್ರ ಅದನ್ನು

ಅಕ್ಕಸಾಲಿಗರಿಂದ ಪಡೆಯುತ್ತಿದ್ದರು. ಆದರೆ ವಿನಿಮಯದ ಮಾಧ್ಯಮ ಎಂಬ ನೆಲೆಯಲ್ಲಿ ಚಿನ್ನದಿಂದ ಆಗುವ ಕೆಲಸವೆಲ್ಲವೂ ಈ ರಶೀದಿಯಿಂದಲೂ ಆಗುತ್ತಿತ್ತು. ಅದು ಒಬ್ಬನ ಬಳಿಯಿದ್ದರೆ ಅದರಲ್ಲಿ ನಮೂದಿಸಲಾಗಿರುವಷ್ಟು ಚಿನ್ನ ಅವನ ಬಳಿಯಿದೆ ಎಂದರ್ಥ.

ಅಕ್ಕಸಾಲಿಗರ ಬಳಿ ಇರಿಸಲಾಗಿರುವ ಚಿನ್ನದ ಹತ್ತರಲ್ಲಿ ಒಂದಂಶ ಕೂಡಾ ಜನರು ತೆಗೆದುಕೊಂಡು ಹೋಗುವುದಿಲ್ಲವೆಂಬುದು ಅವರಿಗೆ ಅನುಭವದಿಂದ ತಿಳಿದು ಬಂತು. ಅದರ 90 ಶೇಕಡಾ ಭಾಗವು ಅವರ ತಿಜೋರಿಗಳಲ್ಲೇ ಬಿದ್ದಿರುತ್ತಿತ್ತು. ಈ 90 ಶೇಕಡಾ ಭಾಗವನ್ನು ತಾವು ಯಾಕೆ ಉಪಯೋಗಿಸಿಕೊಳ್ಳಬಾರದೆಂದು ಅವರು ಯೋಚಿಸತೊಡಗಿದರು. ಅವರು ಜನರಿಗೆ ಆ ಚಿನ್ನವನ್ನು ಬಡ್ಡಿಯ ಸಾಲದ ರೂಪದಲ್ಲಿ ನೀಡತೊಡಗಿದರು. ಅದನ್ನು ತಮ್ಮ ಒಡೆತನಕ್ಕೆ ಸೇರಿದ ವಸ್ತುವಿನಂತೆಯೇ ಬಳಸತೊಡಗಿದರು. ವಾಸ್ತವದಲ್ಲಿ ಅದರ ಒಡೆತನವು ಜನರಿಗೆ ಸೇರಿದ್ದು ಅದರ ಸಂರಕ್ಷಣೆಗಾಗಿ ಅವರು ಜನರಿಂದ ಶುಲ್ಕವನ್ನೂ ವಸೂಲಿ ಮಾಡುತ್ತಿದ್ದರು. ಈಗ ಅದೇ ಚಿನ್ನವನ್ನು ಸಾಲವಾಗಿ ನೀಡಿ ಅದರಿಂದ ಬಡ್ಡಿಯನ್ನೂ ವಸೂಲಿ ಮಾಡತೊಡಗಿದರು.

ಅವರ ಚಾಣಾಕ್ಷತೆ ಮತ್ತು ಮೋಸ ಇಲ್ಲಿಗೇ ನಿಲ್ಲಲಿಲ್ಲ. ಅವರು ನಿಜವಾದ ಚಿನ್ನವನ್ನು ಸಾಲದ ರೂಪದಲ್ಲಿ ನೀಡುವ ಬದಲು ಅದರ ಆಧಾರದಲ್ಲಿ ಕಾಗದದ ರಶೀದಿಗಳನ್ನು ಚಲಾಯಿಸತೊಡಗಿದರು. ಏಕೆಂದರೆ ಅವರು ನೀಡಿದ ಕಾಗದ ಕೂಡಾ ವಿನಿಮಯದ ಮಾಧ್ಯಮ ಎಂಬ ನೆಲೆಯಲ್ಲಿ ಚಿನ್ನ ಮಾಡುತ್ತಿದ್ದಂತಹ ಎಲ್ಲ ಕೆಲಸಗಳನ್ನೂ ಮಾಡುತ್ತಿತ್ತು. ತಮ್ಮ ಬಳಿ ಇರಿಸಲ್ಪಟ್ಟಿರುವ ಚಿನ್ನದ ಕೇವಲ 10 ಶೇಕಡಾ ಮಾತ್ರ ಸಾಮಾನ್ಯವಾಗಿ ಹಿಂದಕ್ಕೆ ಪಡೆಯಲಾಗುತ್ತದೆಂಬುದು ಅವರಿಗೆ ಅನುಭವದಿಂದ ತಿಳಿದು ಬಂದಿತ್ತು. ಆದ್ದರಿಂದ ಉಳಿದ 90 ಶೇಕಡಾ ಚಿನ್ನದ ಹತ್ತುಪಟ್ಟು ಕೃತಕ ರಶೀದಿಗಳನ್ನು ಮಾಡಿ ಕಾಗದದ ನೋಟಿನಂತೆ ಅವರು ಚಲಾಯಿಸಿದರು ಮತ್ತು ಅದನ್ನು ಸಾಲ ನೀಡತೊಡಗಿದರು. ಈ ವ್ಯವಹಾರವನ್ನು ಉದಾಹರಣೆಯ ಮೂಲಕ ಹೀಗೆ ತಿಳಿದುಕೊಳ್ಳಬಹುದು- ಒಬ್ಬನು ಒಬ್ಬ ಅಕ್ಕಸಾಲಿಗನ ಬಳಿ 1000 ರೂಪಾಯಿಯ ಚಿನ್ನ ಇರಿಸಿದ್ದಾನೆ. ಆಗ ಅಕ್ಕಸಾಲಿಗನು 1000 ರೂಪಾಯಿಯ 10 ರಶೀದಿಗಳನ್ನು ಮಾಡಿ ಪ್ರತಿಯೊಂದರಲ್ಲೂ ನನ್ನ ಬಳಿ 1000 ರೂಪಾಯಿಯ ಚಿನ್ನವಿದೆ ಎಂದು ಬರೆದು ಕೊಟ್ಟ. ಆ ಹತ್ತು ರಶೀದಿಗಳ ಪೈಕಿ ಒಂದನ್ನು ತನ್ನ ಬಳಿ ನಿಜವಾಗಿ ಚಿನ್ನ ಇರಿಸಿದವನಿಗೆ ಕೊಟ್ಟ. ಉಳಿದ ಒಂಬತ್ತನ್ನು (ಅದರ ಹಿಂದೆ ಯಾವುದೇ ಚಿನ್ನ ಇರಲಿಲ್ಲ) ಇತರರಿಗೆ ಸಾಲದ ರೂಪದಲ್ಲಿ ಕೊಟ್ಟು, ಅವುಗಳ ಮೇಲೆ ಬಡ್ಡಿ ವಸೂಲಿ ಮಾಡಿದ.

ಇದೊಂದು ದೊಡ್ಡ ವಂಚನೆಯೆಂಬುದು ವ್ಯಕ್ತ. ಈ ಮೋಸದಲ್ಲಿ ಅವರು 90 ಶೇಕಡಾ ಕೃತಕ ಹಣವನ್ನು ಸೃಷ್ಟಿಸಿ ಅದರ ಒಡೆಯರಾದರು. ಸಮಾಜದ ಮೇಲೆ ಅದನ್ನು ಸಾಲದ ರೂಪದಲ್ಲಿ ಹೇರಿ ಅವರಿಂದ 10-12 ಶೇ. ಬಡ್ಡಿ ವಸೂಲು ಮಾಡಿದರು. ವಸ್ತುತಃ

ಅದನ್ನವರು ಸಂಪಾದಿಸಿಯೂ ಇಲ್ಲ. ಯಾವುದೇ ಧರ್ಮಸಮ್ಮತ ಮಾರ್ಗದಿಂದ ಅದು ಅವರ ಬಳಿ ಬರಲೂ ಇಲ್ಲ. ಅದು ನಿಜವಾದ ಹಣವಾಗಿರಲಿಲ್ಲ. ನೈತಿಕ ಮತ್ತು ಆರ್ಥಿಕ ತತ್ವಗಳ ಆಧಾರದಲ್ಲಿ ಅದನ್ನು ವಿನಿಮಯ ಮಾಧ್ಯಮದ ರೂಪದಲ್ಲಿ ವಸ್ತುಗಳು ಮತ್ತು ಸೇವೆಗಳ ಬದಲಿಗೆ ಕೊಡುವಂತಿರಲಿಲ್ಲ. ಓರ್ವ ಸರಳ ಸ್ವಭಾವದ ವ್ಯಕ್ತಿ ಅವರ ಈ ಕೃತ್ಯದ ಕುರಿತು ಕೇಳಿದಾಗ ಮೋಸ-ವಂಚನೆಗಳಿಗೆ ಸಂಬಂಧಿಸಿದಂತಹ ದಂಡಸಂಹಿತೆಯ ವಿಧಿಗಳು ಅವನ ನೆನಪಿಗೆ ಬರಬಹುದು. ಇದನ್ನು ಕೇಳಿದ ಬಳಿಕ ಅವನು ಖಂಡಿತವಾಗಿಯೂ ಆ ಅಕ್ಕಸಾಲಿಗರ ವಿರುದ್ಧ ಮೊಕದ್ದಮೆ ಹೂಡಲಾಗಿರಬಹುದು ಎಂಬುದನ್ನು ಕೇಳಲು ಕಾತರನಾಗಿರಬಹುದು. ಆದರೆ ಅಲ್ಲಿ ನಡೆದದ್ದು ಇದಕ್ಕೆ ತೀರಾ ವ್ಯತಿರಿಕ್ತವಾಗಿತ್ತು. ಆ ಅಕ್ಕಸಾಲಿಗರು ಈ ವಂಚನೆಯ ಮೂಲಕ ದೇಶದ 90 ಶೇಕಡಾ ಸಂಪತ್ತಿನ ಒಡೆಯರಾದರು. ಅರಸ, ಮಂತ್ರಿ ಮತ್ತು ನಾಯಕರೆಲ್ಲರೂ ಅವರ ಸಾಲದ ಜಾಲದಲ್ಲಿ ಸಿಲುಕಿಕೊಂಡಿದ್ದರು. ಸರಕಾರಗಳು ಕೂಡಾ ಯುದ್ಧದ ಸಂದರ್ಭಗಳಲ್ಲಿ ಮತ್ತು ಆಂತರಿಕ ಬಿಕ್ಕಟ್ಟಿನ ಸಂದರ್ಭಗಳಲ್ಲಿ ಅವರಿಂದ ಭಾರೀ ಮೊತ್ತದ ಸಾಲಗಳನ್ನು ಪಡೆದಿದ್ದುವು. ಅವರು ಇಷ್ಟೊಂದು ಸಂಪತ್ತಿನ ಒಡೆಯರು ಹೇಗಾದರು ಎಂದು ಕೇಳುವ ಸಾಮರ್ಥ್ಯ ಈಗ ಯಾರಿಗೂ ಇರಲಿಲ್ಲ. ಹಳೆಯ ಊಳಿಗಮಾನ್ಯ ಪದ್ಧತಿಯ ವಿರುದ್ಧ ಕೈಗಾರಿಕಾ ಕ್ರಾಂತಿಯ ವೇಳೆ ಹೊಸ ಬೂರ್ಶ್ವಾ ಸಂಸ್ಕೃತಿ ವಿಶಾಲ ತಳಹದಿ, ಸ್ವಾತಂತ್ರ್ಯ ಮತ್ತು ಪ್ರಜಾಸತ್ತೆಯ ಭಾರೀ ಆಯುಧಗಳೊಂದಿಗೆ ಕಾಣಿಸಿಕೊಂಡಾಗ ಅದರ ಮುಂದಿನ ಸಾಲುಗಳಲ್ಲಿ ಈ ಸಾಹುಕಾರರು ಮತ್ತು ಕೈಗಾರಿಕೋದ್ಯಮಿಗಳೇ ಇದ್ದರು. ಅವರ ಬೆಂಬಲಕ್ಕೆ ತತ್ವಜ್ಞಾನ, ಕಲೆ ಮತ್ತು ಸಾಹಿತ್ಯದ ಒಂದು ದಂಡೇ ಇತ್ತು. ಅದು ಈ ಅಕ್ಕಸಾಲಿಗ ಮಹಾಶಯನ (Mr. Goldsmith) ಸಂಪತ್ತಿನ ಮೂಲ ಕಂಡು ಹುಡುಕಲು ಹೊರಟವರ ಮೇಲೆ ಮುಗಿ ಬೀಳುತ್ತಿತ್ತು. ಈ ರೀತಿ ವಂಚನೆ ಮತ್ತು ಮೋಸದಿಂದ ಸೃಷ್ಟಿಯಾದ ಈ ಸಂಪತ್ತು ಕಾನೂನಿನ ಹಿಡಿತದಿಂದ ಪಾರಾಯಿತು. ಮಾತ್ರವಲ್ಲ, ಕಾನೂನು ಅದನ್ನು ಸಿಂಧುವೆಂದೇ ಸಾರಿತು. ಸರಕಾರಗಳು ಈಗ ಅಕ್ಕಸಾಲಿಗರ ಬ್ಯಾಂಕರ್ ಮತ್ತು ಫೈನಾನ್ಸರ್ ಆಗಿದ್ದಾರೆ. ನೋಟು ಜಾರಿ ಮಾಡುವ ಹಕ್ಕನ್ನು ಮಾನ್ಯ ಮಾಡಿದುವು. ಅವರು ಚಲಾವಣೆಗೆ ತಂದ ನೋಟುಗಳು ಅಧಿಕೃತ ಕಾಗದದ ಹಣ ಎಂಬ ನೆಲೆಯಲ್ಲಿ ವ್ಯಾಪಾರೀ ಜಗತ್ತಿನಲ್ಲಿ ಚಲಾವಣೆಗೆ ಬಂತು.

## ಎರಡನೆಯ ಹಂತ

ಇದುವೇ ಆ ಬಂಡವಾಳದ ವಾಸ್ತವಿಕತೆ. ಅದರ ಆಧಾರದಲ್ಲೇ ಪುರಾತನ ಕಾಲದ ಅಕ್ಕಸಾಲಿಗರು ಮತ್ತು ಆಧುನಿಕ ಯುಗದ ಸಾಹುಕಾರರು ಸಂಪತ್ತಿನ ಅಧಿಪತಿಗಳಾದರು. ಅನಂತರ ಅವರು ಇನ್ನೊಂದು ಹೆಜ್ಜೆ ಮುಂದಿರಿಸಿದರು. ಅದು ಪ್ರಥಮ ಹೆಜ್ಜೆಗಿಂತ ಹೆಚ್ಚು ವಿನಾಶಕಾರಿಯಾಗಿತ್ತು.

ಯಾವ ಕಾಲದಲ್ಲಿ ಈ ಆಧುನಿಕ ಸಾಹುಕಾರಿ ವ್ಯವಸ್ಥೆಯು ಸೋಗಿನ ಬಂಡವಾಳದ ಬಲದಲ್ಲಿ ಎದ್ದೇಳುತ್ತಿತ್ತೋ ಅಂದು ಪಶ್ಚಿಮ ಯೂರೋಪ್‌ನಲ್ಲಿ ಕೈಗಾರಿಕೋದ್ಯಮ ಮತ್ತು ವ್ಯಾಪಾರದ ಪ್ರವಾಹವು ಉಕ್ಕೇರುತ್ತಿತ್ತು. ಅದು ಇಡೀ ಜಗತ್ತನ್ನು ಅಧೀನಗೊಳಿಸಿತ್ತು. ಇನ್ನೊಂದೆಡೆ ಸಂಸ್ಕೃತಿ-ನಾಗರಿಕತೆಗಳ ಒಂದು ಹೊಸ ಕಟ್ಟಡ ಮೇಲೆ ಬರುತ್ತಿತ್ತು. ಅದು ವಿಶ್ವವಿದ್ಯಾಲಯದಿಂದ ಹಿಡಿದು ನಗರಪಾಲಿಕೆಗಳ ತನಕ ಜೀವನದ ಎಲ್ಲ ರಂಗಗಳ ನವ ನಿರ್ಮಾಣವನ್ನು ಬಯಸುತ್ತಿತ್ತು. ಆ ವೇಳೆ ಎಲ್ಲ ರೀತಿಯ ಆರ್ಥಿಕ ಮತ್ತು ನಾಗರಿಕ ಕಾರ್ಯಗಳಿಗೆ ಬಂಡವಾಳದ ಅಗತ್ಯವಿತ್ತು. ಹೊಸ ಹೊಸ ವ್ಯಾಪಾರೋದ್ಯಮಗಳು ತಮ್ಮ ಆರಂಭಕ್ಕೆ ಬಂಡವಾಳವನ್ನು ಬಯಸುತ್ತಿದ್ದುವು. ಹಿಂದಿನಿಂದಲೇ ನಡೆದು ಬರುತ್ತಿರುವಂತಹ ವ್ಯಾಪಾರಗಳು ತಮ್ಮ ಪ್ರಗತಿ ಮತ್ತು ಮುನ್ನಡೆಗಾಗಿ ನಿತ್ಯ ಏರುತ್ತಿರುವ ಪ್ರಯಾಣದಲ್ಲಿ ಬಂಡವಾಳವನ್ನು ಬಯಸುತ್ತಿದ್ದುವು. ಸಂಸ್ಕೃತಿ ಮತ್ತು ನಾಗರಿಕತೆಯ ಅಭಿವೃದ್ಧಿಗಾಗಿ ಕೈಗೊಂಡ ವಿಭಿನ್ನ ವೈಯಕ್ತಿಕ ಮತ್ತು ಸಾಮಾಜಿಕ ಯೋಜನೆಗಳಿಗೆ ಅವುಗಳ ಆರಂಭ ಮತ್ತು ಅಭಿವೃದ್ಧಿಗಾಗಿ ಅದರ ಅಗತ್ಯವಿತ್ತು. ಈ ಎಲ್ಲ ಕಾರ್ಯಗಳಲ್ಲಿ ತೊಡಗಿರುವವರಿಗೆ ಖಾಸಗಿ ಬಂಡವಾಳವು ಸಾಕಾಗುತ್ತಿರಲಿಲ್ಲ. ಈಗ ಉಳಿದಿದ್ದುದು ಎರಡೇ ಮಾರ್ಗಗಳು. ಅವುಗಳಿಂದ ಮಾತ್ರ ಆಧುನಿಕ ಸಂಸ್ಕೃತಿಯ ಈ ನವ ತಾರುಣ್ಯಕ್ಕೆ ಜೀವಜಲ ಒದಗಿಸಲು ಸಾಧ್ಯವಿತ್ತು.

1. ಹಿಂದಿನ ಅಕ್ಕಸಾಲಿಗರಲ್ಲಿ ಮತ್ತು ಇಂದಿನ ಸಾಹುಕಾರರಲ್ಲಿ ಇದ್ದಂತಹ ಬಂಡವಾಳ.

2. ಸ್ಥಿತಿವಂತರ ಮತ್ತು ಮಧ್ಯಮ ವರ್ಗದ ಜನರ ಬಳಿ ಅವರ ಆದಾಯದಿಂದ ಉಳಿತಾಯ ಮಾಡಿ ಕೂಡಿಟ್ಟ ಬಂಡವಾಳ.

ಈ ಪೈಕಿ ಮೊದಲನೆಯ ವಿಧದ ಬಂಡವಾಳವಂತೂ ಸಾಹುಕಾರರ ವಶದಲ್ಲೇ ಇತ್ತು. ಅವರು ಮೊದಲಿನಿಂದಲೇ ಬಡ್ಡಿಕೋರತನವನ್ನು ಅಭ್ಯಾಸ ಮಾಡಿಕೊಂಡಿದ್ದರು. ಆದ್ದರಿಂದ ಅವರ ಒಂದು ರೂಪಾಯಿ ಕೂಡಾ ಪಾಲುದಾರಿಕೆಯ ಆಧಾರದಲ್ಲಿ ಯಾವುದೇ ಕಾರ್ಯಕ್ಕೆ ಸಿಗುವುದು ಅಸಾಧ್ಯವಾಗಿತ್ತು. ಅವರಿಂದ ಉದ್ಯಮಿಗಳು, ವ್ಯಾಪಾರಿಗಳು, ಆರ್ಥಿಕ ಮತ್ತು ಸಾಂಸ್ಕೃತಿಕ ಕಾರ್ಯಕರ್ತರಿಗೆ ಸಾಲದ ರೂಪದಲ್ಲಿ ಮಾತ್ರ ಈ ಬಂಡವಾಳ ಸಿಕ್ಕಿತು. ಅವರಿಗೆ ಲಾಭವಾಗಲಿ, ನಷ್ಟವಾಗಲಿ, ಅವರ ಲಾಭ ಹೆಚ್ಚಿರಲಿ, ಕಡಿಮೆಯಿರಲಿ ಸಾಹುಕಾರರಿಗೆ ಒಂದು ನಿಶ್ಚಿತ ದರದಲ್ಲಿ ಲಾಭವನ್ನು ನೀಡುತ್ತಿರುವ ಶರತ್ತಿನ ಮೇಲೆಯೇ ಈ ಬಂಡವಾಳ ಸಿಕ್ಕಿತು.

ಇನ್ನು ಎರಡನೆಯ ಮೂಲದಿಂದ ಮಾತ್ರ ಆರ್ಥಿಕ ವ್ಯವಹಾರ, ನಿರ್ಮಾಣ ಮತ್ತು ಅಭಿವೃದ್ಧಿ ಕಾರ್ಯಗಳಿಗೆ ಉತ್ತಮವೂ ಆರೋಗ್ಯಕರವೂ ಆದ ರೂಪದಲ್ಲಿ ಬಂಡವಾಳ ಬರಬಹುದಾಗಿತ್ತು. ಆದರೆ ಅಲ್ಲಿಯೂ ಈ ಸಾಹುಕಾರರು ಒಂದು ಸಂಚು ಹೂಡಿದರು. ಅದರಿಂದಾಗಿ ಈ ಮೂಲವೂ ಅವರ ವಶಕ್ಕೆ ಬಂತು. ಆ ಬಂಡವಾಳಕ್ಕೂ ಅವರು ನಾಗರಿಕ ಮತ್ತು ಆರ್ಥಿಕ ವ್ಯವಹಾರಗಳ ಕಡೆಗೆ ಹೋಗುವ ಎಲ್ಲ ದ್ವಾರಗಳನ್ನು- ಬಡ್ಡಿಯ ಸಾಲದ

ದ್ವಾರವೊಂದನ್ನು ಬಿಟ್ಟು- ಮುಚ್ಚಿಬಿಟ್ಟರು. ಅವರು ಬಡ್ಡಿಯ ಆಮಿಷವೊಡ್ಡಿ ತಮ್ಮ ಅಗತ್ಯಕ್ಕಿಂತ ಹೆಚ್ಚಿನ ಆದಾಯವನ್ನು ಉಳಿತಾಯ ಮಾಡುತ್ತಿದ್ದ ಅಥವಾ ತಮ್ಮ ಅಗತ್ಯಗಳನ್ನು ಬದಿಗೊತ್ತಿ ಒಂದಿಷ್ಟು ಉಳಿತಾಯ ಮಾಡುತ್ತಿದ್ದ ಜನರ ಬಂಡವಾಳವನ್ನು ತಮ್ಮೆಡೆಗೆ ಸೆಳೆಯಲು ತೊಡಗಿದರು. ಈ ಹಿಂದೆ ತಿಳಿಸಿರುವಂತೆ ಈ ಅಕ್ಕಸಾಲಿಗರು ಮತ್ತು ಸಾಹುಕಾರರು ಹಿಂದಿನಿಂದಲೇ ಈ ರೀತಿಯ ಜನರೊಂದಿಗೆ ಸಂಪರ್ಕವಿರಿಸಿಕೊಂಡಿದ್ದರು. ಅವರ ಉಳಿತಾಯವು ಇವರಲ್ಲೇ ಠೇವಣಿಯಾಗಿ ಇರಿಸಲ್ಪಡುತ್ತಿದ್ದುವು. ಈಗ ಅವರು ತಮ್ಮ ಬಂಡವಾಳವನ್ನು ವ್ಯಾಪಾರದಲ್ಲಿ ತೊಡಗಿಸುವುದನ್ನು ಕಂಡಾಗ ಮತ್ತು ಅವರ ಉಳಿತಾಯದ ಹಣವು ತಮ್ಮ ಬಳಿಗೆ ಬರುವ ಬದಲಾಗಿ ಕಂಪೆನಿಗಳ ಪಾಲು ಬಂಡವಾಳವನ್ನು ಖರೀದಿಸುವಲ್ಲಿ ವ್ಯಯವಾಗುವುದನ್ನು ನೋಡಿದಾಗ ಅವರು "ನೀವೇಕೆ ತೊಂದರೆ ತೆಗೆದುಕೊಳ್ಳುತ್ತೀರಿ? ಈ ರೀತಿ ನೀವೇ ಪಾಲುದಾರಿಕೆಯ ವ್ಯವಹಾರವನ್ನು ಇತ್ಯರ್ಥಪಡಿಸಬೇಕಾದೀತು. ನೀವೇ ಲೆಕ್ಕ ಇಟ್ಟುಕೊಳ್ಳಬೇಕಾದೀತು. ಮಾತ್ರವಲ್ಲದೆ ನಿಮಗೆ ಅದರಲ್ಲಿ ನಷ್ಟದ ಭೀತಿಯೂ ಇರುವುದು. ಲಾಭದ ಏರಿಳಿತವು ನಿಮ್ಮ ವರಮಾನದ ಮೇಲೆ ಪ್ರಭಾವ ಬೀರುವುದು. ಆದ್ದರಿಂದ ನೀವು ನಿಮ್ಮ ಹಣವನ್ನು ನಮ್ಮಲ್ಲಿ ಠೇವಣಿಯಿಡಿರಿ. ನಾವು ಯಾವುದೇ ಪ್ರತಿಫಲವಿಲ್ಲದೆ ಅದನ್ನು ನಿಮಗಾಗಿ ಸುರಕ್ಷಿತವಾಗಿರಿಸುವೆವು. ಅದರ ಲೆಕ್ಕವನ್ನು ಉಚಿತವಾಗಿ ಬರೆಯುವೆವು. ನಿಮ್ಮಿಂದ ಏನನ್ನಾದರೂ ಪಡೆಯುವ ಬದಲು ನಿಮಗೆ ಬಡ್ಡಿ ನೀಡುವೆವು" ಎಂದು ಹೇಳಿದರು.

ಈ ಸಂಚಿನ ಮೂಲಕ ಶೇ. 90 ಅಥವಾ ಅದಕ್ಕಿಂತಲೂ ಹೆಚ್ಚಿನ ಉಳಿತಾಯದ ಹಣ ನೇರವಾಗಿ ಆರ್ಥಿಕ ಮತ್ತು ನಾಗರಿಕ ಚಟುವಟಿಕೆಗಳಲ್ಲಿ ತೊಡಗುವ ಬದಲು ಸಾಹುಕಾರನ ಹಿಡಿತಕ್ಕೆ ಹೋಯಿತು. ಸರಿಸುಮಾರು ಎಲ್ಲ ಬಂಡವಾಳದ ಮೇಲೆ ಅವನ ಹಿಡಿತ ಸ್ಥಾಪಿಸಲ್ಪಟ್ಟಿತು. ಈ ತನಕ ಸಾಹುಕಾರನು ತನ್ನ ಮೋಸದ ಬಂಡವಾಳವನ್ನು ಬಡ್ಡಿಯ ಮೇಲೆ ಚಲಾಯಿಸುತ್ತಿದ್ದನು. ಈಗ ಇತರರ ಬಂಡವಾಳವನ್ನೂ ಅಗ್ಗದ ಬಡ್ಡಿ ದರದಲ್ಲಿ ಪಡೆದು ಹೆಚ್ಚಿನ ಬಡ್ಡಿ ದರದ ಮೇಲೆ ಸಾಲ ಕೊಡತೊಡಗಿದ. ಅವನು ನಿಶ್ಚಯಿಸಿದ ಬಡ್ಡಿ ದರಕ್ಕಿಂತ ಕಡಿಮೆಗೆ ಯಾವ ಕೆಲಸಕ್ಕೂ ಎಲ್ಲಿಂದಲೂ ಯಾವುದೇ ಬಂಡವಾಳ ಸಿಗದಂತೆ ಅವನು ನೋಡಿಕೊಂಡ. ಸಾಹುಕಾರನ ಮೂಲಕ ಬಂಡವಾಳ ಹೂಡುವ ಬದಲು ನೇರವಾಗಿ ತಮ್ಮ ಬಂಡವಾಳವನ್ನು ವ್ಯಾಪಾರದಲ್ಲಿ ತೊಡಗಿಸುವ ಕೆಲವು ಜನರಿಗೆ ಕೂಡಾ ಒಂದು ನಿಶ್ಚಿತ ಲಾಭ ದರವನ್ನು ಪಡೆಯುವ ಚಟ ಹಿಡಿಯಿತು. ಅವರು ಪಾಲು ಬಂಡವಾಳ (Shares)ವನ್ನು ಖರೀದಿಸುವ ಬದಲು ಸಾಲ ಬಂಡವಾಳ(Debentures)ವನ್ನು ಖರೀದಿಸ ತೊಡಗಿದರು. ಅದರಲ್ಲಿ ಒಂದು ನಿಶ್ಚಿತ ದರದಲ್ಲಿ ಲಾಭಾಂಶ ನೀಡುವುದನ್ನು ಖಾತ್ರಿ ಪಡಿಸಲಾಗಿತ್ತು.

ಈ ಕಾರ್ಯವಿಧಾನದಿಂದಾಗಿ ವಿಭಜನೆಯು ಪೂರ್ಣಗೊಂಡಿತು. ಆರ್ಥಿಕ ಮತ್ತು ನಾಗರಿಕ ರಂಗಗಳಲ್ಲಿ ದುಡಿಯುವವರೆಲ್ಲರೂ ಒಂದೆಡೆ ಸೇರಿದರು. ಎಲ್ಲ ಆರ್ಥಿಕ ಮತ್ತು

ಸಾಂಸ್ಕೃತಿಕ ಉತ್ಪಾದನೆಗಳು ಅವರ ಶ್ರಮ ಮತ್ತು ಸಾಮರ್ಥ್ಯದ ಮೇಲೆಯೇ ಹೊಂದಿಕೊಂಡಿವೆ. ನೀರಿನವರು ಹೊಲದವರೊಂದಿಗೆ ನ್ಯಾಯೋಚಿತವಾಗಿ ಸಹಕಾರ ಮಾಡುವುದಕ್ಕೆ ಸಿದ್ಧವಾಗಲಿಲ್ಲ. ನೀರಿನ ಈ ಭಂಡಾರವನ್ನು ಸಾಮಾಜಿಕ ಹಿತಕ್ಕೆ ಅನುಗುಣವಾಗಿ ವ್ಯಯಿಸುವ ಬದಲಿಗೆ ಕೇವಲ ಸ್ವಾರ್ಥ ಹಿತಾಸಕ್ತಿಗಾಗಿ ಅದರಲ್ಲೂ ತಮ್ಮ ಆರ್ಥಿಕ ಹಿತಾಸಕ್ತಿಗಾಗಿ ಬಳಸುವ ಧೋರಣೆಯನ್ನು ಅನುಸರಿಸ ತೊಡಗಿದರು.

ಈ ಕಾರ್ಯವಿಧಾನದಿಂದಾಗಿ ಇಡೀ ಲೋಕದ ಮೇಲೆ ಪ್ರಭುತ್ವ ಸಾಧಿಸಲಿದ್ದಂತಹ ಪಾಶ್ಚಾತ್ಯ ನವ ನಾಗರಿಕತೆಯು ಒಂದು ಅಪ್ಪಟ ಭೌತಿಕವಾದಿ ನಾಗರಿಕತೆಯಾಯಿತು. ಅದರಲ್ಲಿ ಬಡ್ಡಿ ದರವು ಮೂಲ ಮಾನದಂಡವಾಯಿತು. ಅದರ ಆಧಾರದಲ್ಲೇ ಅಂತಿಮವಾಗಿ ಎಲ್ಲ ವಸ್ತುಗಳ ಮೌಲ್ಯವು ನಿರ್ಧರಿಸಲ್ಪಡುತ್ತಿತ್ತು. ಏಕೆಂದರೆ ನಾಗರಿಕತೆಯ ತೋಟವು ಬಂಡವಾಳವೆಂಬ ಜೀವಜಲವನ್ನೇ ಆಶ್ರಯಿಸಿತ್ತು. ಈ ಜೀವಜಲದ ಒಂದೊಂದು ಬಿಂದುವಿಗೂ ಬಡ್ಡಿ ದರಕ್ಕೆ ಅನುಸಾರವಾಗಿ ಒಂದು ಬೆಲೆಯು ನಿರ್ಧರಿಸಲ್ಪಟ್ಟಿತ್ತು. ಆದ್ದರಿಂದ ನಾಗರಿಕತೆಯ ಹೊಲದಲ್ಲಿ ಏನಾದರೂ ಬಿತ್ತುವುದಿದ್ದರೆ, ಅದರ ಯಾವುದಾದರೂ ಬೆಳೆಯು ಬೆಲೆ ಬಾಳುವಂತಹದ್ದಾಗಿರಬೇಕಾದರೆ ಅದು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಬೂರ್ಶ್ವಾ ನಾಗರಿಕತೆಯ ಮಹಾ ನಾಯಕನಾದ ಸಾಹುಕಾರನು ನಿಶ್ಚಯಿಸಿದ ಬಡ್ಡಿ ದರಕ್ಕಿಂತ ಹೆಚ್ಚಿನ ಲಾಭವನ್ನು ತರುವಂತಿರಬೇಕು.

ಈ ಕಾರ್ಯವಿಧಾನವು ಲೇಖನಿ ಮತ್ತು ಖಡ್ಗದ ಪ್ರಭುತ್ವವನ್ನು ಕೊನೆಗೊಳಿಸಿತು. ಅದರ ಸ್ಥಾನದಲ್ಲಿ ಬಂಡವಾಳದ ಪ್ರಭುತ್ವವನ್ನು ಸ್ಥಾಪಿಸಿತು. ಬಡ ರೈತ ಮತ್ತು ಕಾರ್ಮಿಕನಿಂದ ಹಿಡಿದು ದೊಡ್ಡ ದೊಡ್ಡ ಕೈಗಾರಿಕೋದ್ಯಮಿ ಮತ್ತು ದೊಡ್ಡ ದೊಡ್ಡ ಸಾಮ್ರಾಜ್ಯಗಳ ತನಕ ಪ್ರತಿಯೊಬ್ಬನ ಮೂಗಿನ ಮೇಲೂ ಒಂದು ದಾರ ಹಾಕಲ್ಪಟ್ಟಿತು. ಆ ದಾರವನ್ನು ಸಾಹುಕಾರನೇ ನಿಯಂತ್ರಿಸುತ್ತಿದ್ದ.

## ಮೂರನೆಯ ಹಂತ

ಅನಂತರ ಈ ವರ್ಗವು ಮೂರನೆಯ ಹೆಜ್ಜೆ ಮುಂದಿರಿಸಿತು. ತನ್ನ ವ್ಯಾಪಾರಕ್ಕೆ ಅದು ಇಂದು ನವೀನ ಬಂಡವಾಳಶಾಹಿ ವ್ಯವಸ್ಥೆಯೆಂದು ಕರೆಯುವಂತಹ ರೂಪ ನೀಡಿತು. ಮೊದಲು ಇವರು ವೈಯಕ್ತಿಕವಾಗಿ ಕಾರ್ಯವೆಸಗುತ್ತಿದ್ದರು. ಕೆಲವು ಮಂದಿ ಸಾಹುಕಾರರ ವ್ಯಾಪಾರವು ಬೆಳೆಯುತ್ತಾ ಮಹಾನ್ ಸಂಸ್ಥೆಗಳ ರೂಪ ತಾಳಿತು. ಅದರ ಶಾಖೆಗಳು ದೂರ ದೂರದ ಪ್ರದೇಶಗಳಲ್ಲಿ ಸ್ಥಾಪಿಸಲ್ಪಟ್ಟುವು. ಆದರೂ ಇವು ಪ್ರತ್ಯೇಕ ಕುಟುಂಬಗಳಾಗಿದ್ದು ತಂತಮ್ಮ ಹೆಸರಲ್ಲೇ ಕಾರ್ಯಾಚರಿಸುತ್ತಿದ್ದರು. ಅನಂತರ ಅವರಿಗೆ ಒಂದು ಯೋಚನೆ ಹೊಳೆಯಿತು. ವ್ಯಾಪಾರದ ಎಲ್ಲ ವಿಭಾಗಗಳಲ್ಲಿ ಪಾಲು ಬಂಡವಾಳದ ಕಂಪೆನಿಗಳು ಸ್ಥಾಪನೆಯಾಗುತ್ತಿರುವಂತೆ ರೂಪಾಯಿಯ ವ್ಯಾಪಾರಕ್ಕಾಗಿಯೂ ಕಂಪೆನಿಗಳನ್ನು ಸ್ಥಾಪಿಸಿ ದೊಡ್ಡ

ಪ್ರಮಾಣದಲ್ಲಿ ಅದರ ವ್ಯವಸ್ಥೆ ಮಾಡಲಾಯಿತು. ಇಂದು ಇಡೀ ಲೋಕದ ಸಾಂಪತ್ತಿಕ ವ್ಯವಸ್ಥೆಯ ಮೇಲೆ ನಿಯಂತ್ರಣ ಸಾಧಿಸಿರುವಂತಹ ಬ್ಯಾಂಕ್‌ಗಳು ಈ ರೀತಿ ಅಸ್ತಿತ್ವಕ್ಕೆ ಬಂದುವು.

ಈ ಹೊಸ ವ್ಯವಸ್ಥೆಯ ವಿಧಾನವು ಸಂಕ್ಷಿಪ್ತದಲ್ಲಿ ಈ ರೀತಿಯಿದೆ- ಕೆಲವು ಮಂದಿ ಬಂಡವಾಳಿಗರು ಸೇರಿ ಬ್ಯಾಂಕ್ ಎಂಬ ಹೆಸರಿನ ಒಂದು ಸಾಹುಕಾರಿ ಸಂಸ್ಥೆಯನ್ನು ಸ್ಥಾಪಿಸುತ್ತಾರೆ. ಈ ಸಂಸ್ಥೆಯಲ್ಲಿ ಎರಡು ರೀತಿಯ ಬಂಡವಾಳವು ಬಳಕೆಯಾಗುತ್ತದೆ. ಒಂದು ಅದನ್ನು ಸ್ಥಾಪಿಸುವಾಗ ಪಡೆದ ಪಾಲು ಬಂಡವಾಳ. ಇನ್ನೊಂದು ಠೇವಣಿದಾರರ ಬಂಡವಾಳ. ಅದು ಬ್ಯಾಂಕಿನ ಕೆಲಸ ಮತ್ತು ಹೆಸರು ಬೆಳೆದಂತೆಲ್ಲಾ ಹೆಚ್ಚೆಚ್ಚು ಸಿಗುತ್ತಿರುತ್ತದೆ. ಇದರ ಆಧಾರದಲ್ಲೇ ಬ್ಯಾಂಕಿನ ಶಕ್ತಿ ಮತ್ತು ಅದರ ಪ್ರಭಾವವೂ ಬೆಳೆಯುತ್ತಿರುತ್ತದೆ. ಒಂದು ಬ್ಯಾಂಕಿನ ಯಶಸ್ಸಿನ ಮಾನದಂಡವೇನೆಂದರೆ ಅದರಲ್ಲಿ ಅದರ ಪಾಲುದಾರರು ಹೂಡಿದ ಬಂಡವಾಳವು ಕನಿಷ್ಠ ಪ್ರಮಾಣದಲ್ಲಿದ್ದು ಜನರು ಠೇವಣಿ ಇರಿಸಿದ ಹಣವು ಅತ್ಯಧಿಕವಿರಬೇಕು. ಉದಾಹರಣೆಗೆ ಪಂಜಾಬ್ ನ್ಯಾಶನಲ್ ಬ್ಯಾಂಕನ್ನು ತೆಗೆದು ಕೊಳ್ಳಿ. ಅದು ದೇಶ ವಿಭಜನೆಗಿಂತ ಮುಂಚೆ ಅತಿ ದೊಡ್ಡ ಬ್ಯಾಂಕುಗಳಲ್ಲಿ ಒಂದಾಗಿತ್ತು. ಅದರ ಪಾಲು ಬಂಡವಾಳ ಕೇವಲ ಒಂದು ಕೋಟಿಯಾಗಿತ್ತು. ಅದರಲ್ಲಿ 80 ಲಕ್ಷ ರೂಪಾಯಿಗಿಂತ ಸ್ವಲ್ಪ ಹೆಚ್ಚು ಹಣವನ್ನು ಪಾಲುದಾರರು ಪಾವತಿಸಿದ್ದರು. ಆದರೆ 1945ರ ವೇಳೆಗೆ ಅದರ ಹೂಡಿಕೆಯು 52 ಕೋಟಿಯಷ್ಟಾಯಿತು. ಇದು ಠೇವಣಿದಾರರ ಹಣವಾಗಿತ್ತೆಂಬುದು ವ್ಯಕ್ತ.

ಆದರೆ ಸ್ವಾರಸ್ಯದ ವಿಷಯವೇನೆಂದರೆ ಬ್ಯಾಂಕು ತನ್ನೆಲ್ಲ ಕೆಲಸವನ್ನು ಠೇವಣಿದಾರರ ಹಣದಿಂದ ಮಾಡುತ್ತದೆ. ಅದು ಬ್ಯಾಂಕಿನ ಒಟ್ಟು ಬಂಡವಾಳದ 90-95 ಶೇಕಡ ಮತ್ತು ಕೆಲವೊಮ್ಮೆ 98 ಶೇಕಡ ಇರುತ್ತದೆ. ಆದರೆ ಬ್ಯಾಂಕನ್ನು ನಡೆಸುವಲ್ಲಿ ಮತ್ತು ಅದರ ಧೋರಣೆಗಳಲ್ಲಿ ಆ ಠೇವಣಿದಾರರಿಗೆ ಯಾವ ಪಾಲೂ ಇರುವುದಿಲ್ಲ. ಅದು ಕೇವಲ ಬಂಡವಾಳ ಹೂಡಿದವರ ಕೈಯಲ್ಲಿರುತ್ತದೆ. ಅವರೇ ಬ್ಯಾಂಕಿನ ಒಡೆಯರಾಗಿರುತ್ತಾರೆ. ಅವರ ಪಾಲು ಬ್ಯಾಂಕಿನ ಒಟ್ಟು ಬಂಡವಾಳದಲ್ಲಿ ಕೇವಲ 2-3 ಅಥವಾ 5 ಶೇಕಡ ಅಗಿರುತ್ತದೆ. ಠೇವಣಿದಾರರ ಕೆಲಸ ತಮ್ಮ ಹಣವನ್ನು ಬ್ಯಾಂಕಿಗೆ ಒಪ್ಪಿಸಿ ಅದಕ್ಕೆ ಒಂದು ನಿಶ್ಚಿತ ದರದಲ್ಲಿ ಬಡ್ಡಿ ಪಡೆಯುತ್ತಿರುವುದಾಗಿದೆ. ಇನ್ನು ಈ ಹಣವನ್ನು ಬ್ಯಾಂಕು ಯಾವ ರೀತಿ ಉಪಯೋಗಿಸುತ್ತದೆ ಎಂಬ ವಿಷಯ. ಅದರ ಬಗ್ಗೆ ಅವರು ಏನೂ ಹೇಳುವಂತಿಲ್ಲ. ಅದನ್ನು ನಿರ್ಧರಿಸುವವರು ಪಾಲುದಾರರು ಮಾತ್ರ. ಅವರೇ ವ್ಯವಸ್ಥಾಪಕರನ್ನು ಚುನಾಯಿಸುತ್ತಾರೆ. ಅವರೇ ಧೋರಣೆಗಳನ್ನು ರೂಪಿಸುತ್ತಾರೆ. ಅವರೇ ಬ್ಯಾಂಕಿನ ಆಡಳಿತ ವ್ಯವಸ್ಥೆ ಮತ್ತು ಅದರ ಲೆಕ್ಕ ಪತ್ರಗಳ ಮೇಲ್ನೋಟ ವಹಿಸುತ್ತಾರೆ. ಬಂಡವಾಳ ಎಲ್ಲಿ ಹೂಡಬೇಕು, ಎಲ್ಲಿ ಹೂಡಬಾರದು ಎಂಬುದನ್ನು ನಿರ್ಧರಿಸುವವರು ಕೂಡಾ ಅವರೇ ಆಗಿರುತ್ತಾರೆ. ಪಾಲುದಾರರಲ್ಲಿಯೂ ಎಲ್ಲರೂ ಸಮಾನರಾಗಿರುವುದಿಲ್ಲ. ಸಣ್ಣ ಸಣ್ಣ ಬಂಡವಾಳ ಹೂಡಿದವರಿಗೆ ಬ್ಯಾಂಕಿನ ಮೇಲಿರುವ ಪ್ರಭಾವವು ನಾಮ ಮಾತ್ರವಾಗಿರುತ್ತದೆ. ಕೆಲವು ದೊಡ್ಡ ದೊಡ್ಡ ಹೂಡಿಕೆದಾರರು ಮಾತ್ರ ಅದನ್ನು ಸಂಪೂರ್ಣವಾಗಿ ನಿಯಂತ್ರಿಸುತ್ತಾರೆ.

ಬ್ಯಾಂಕುಗಳು ಅನೇಕ ಚಿಕ್ಕಪುಟ್ಟ ಮತ್ತು ದೊಡ್ಡ ದೊಡ್ಡ ಸೇವೆಗಳನ್ನೂ ನಿರ್ವಹಿಸುತ್ತವೆ. ಆ ಪೈಕಿ ಕೆಲವಂತೂ ಉಪಯುಕ್ತವೂ ಅಗತ್ಯವೂ ಧರ್ಮಸಮ್ಮತವೂ ಆಗಿವೆ. ಆದರೆ ಅದರ ಮುಖ್ಯ ಕೆಲಸ ಬಡ್ಡಿಗೆ ಸಾಲ ನೀಡುವುದಾಗಿದೆ. ಯಾವುದೇ ಬ್ಯಾಂಕು- ಅದು ವಾಣಿಜ್ಯ ಬ್ಯಾಂಕು ಆಗಿರಲಿ, ಕೈಗಾರಿಕಾ ಬ್ಯಾಂಕು ಆಗಿರಲಿ, ವ್ಯವಸಾಯ ಬ್ಯಾಂಕ್ ಆಗಿರಲಿ- ಸ್ವಂತ ನೆಲೆಯಲ್ಲಿ ಯಾವುದೇ ವ್ಯಾಪಾರ, ಉದ್ದಿಮೆ ಮತ್ತು ವ್ಯವಸಾಯವನ್ನು ನಡೆಸುವುದಿಲ್ಲ. ಅದು ವ್ಯಾಪಾರಿಗಳಿಗೆ ಸಾಲ ನೀಡಿ ಬಡ್ಡಿ ವಸೂಲಿ ಮಾಡುತ್ತದೆ. ಉಳಿತಾಯ ಖಾತೆಗಳಲ್ಲಿ ಠೇವಣಿದಾರರಿಂದ ಕಡಿಮೆ ಬಡ್ಡಿ ದರದಲ್ಲಿ ಬಂಡವಾಳವನ್ನು ಪಡೆದು ವ್ಯಾಪಾರಿಗಳಿಗೆ ಅದನ್ನು ಹೆಚ್ಚಿನ ಬಡ್ಡಿ ದರದಲ್ಲಿ ಕೊಡುವ ಮೂಲಕವೇ ಅದು ತನ್ನ ಹೆಚ್ಚಿನ ಲಾಭವನ್ನು ಗಳಿಸುತ್ತದೆ. ಇಲ್ಲಿ ಬ್ಯಾಂಕ್‌ಗಳ ಕಾರ್ಯವಿಧಾನದ ಕುರಿತು ಸ್ವಲ್ಪ ವಿವರಣೆ ನೀಡುವುದು ಸೂಕ್ತವೆನಿಸುತ್ತದೆ. ಇದರಿಂದ ಅವುಗಳ ವ್ಯವಹಾರದ ನೈಜ ನೆಲೆಯನ್ನು ಚೆನ್ನಾಗಿ ತಿಳಿಯಬಹುದಾಗಿದೆ.

ಬ್ಯಾಂಕ್‌ನಲ್ಲಿ ಇರಿಸಲ್ಪಡುವ ಠೇವಣಿಗಳಲ್ಲಿ ಎರಡು ಮುಖ್ಯ ವಿಧಗಳಿವೆ. ಒಂದು, ನಿಖರ(Fixed) ಠೇವಣಿ. ಇನ್ನೊಂದು ಚಾಲ್ತಿ(Current) ಠೇವಣಿ. ಮೊದಲನೆಯದು ಕನಿಷ್ಠ ಮೂರು ತಿಂಗಳು ಅಥವಾ ಅದಕ್ಕಿಂತ ಹೆಚ್ಚಿನ ಅವಧಿಗೆ ಬ್ಯಾಂಕ್‌ಗೆ ನೀಡಲಾಗುತ್ತದೆ. ಎರಡನೆಯದನ್ನು ಖಾತೆದಾರನು ಬೇಕಾದಾಗ ಪಡೆಯುತ್ತಲೂ ಕೊಡುತ್ತಲೂ ಇರುವನು. ಬ್ಯಾಂಕ್‌ಗಳಲ್ಲಿ ಎಷ್ಟು ದೀರ್ಘ ಅವಧಿಗೆ ಠೇವಣಿ ಇಡಲಾಗುತ್ತದೋ ಅಷ್ಟೇ ಅಧಿಕ ಬಡ್ಡಿ ದರವನ್ನು ಅವು ನೀಡುತ್ತವೆ. ಅವಧಿ ಕಡಿಮೆಯಾದಂತೆ ಬಡ್ಡಿ ದರವೂ ಕಡಿಮೆಯಾಗುತ್ತದೆ. ಕೆಲವು ಬ್ಯಾಂಕ್‌ಗಳು ಚಾಲ್ತಿ ಖಾತೆ(Current Account)ಯ ಮೇಲೂ ಕನಿಷ್ಠ ದರದ ಬಡ್ಡಿ ನೀಡುತ್ತವೆ. ಆದರೆ ಸಾಮಾನ್ಯವಾಗಿ ಈ ಖಾತೆಯಲ್ಲಿ ಬಡ್ಡಿ ನೀಡುವ ಪದ್ಧತಿಯಿಲ್ಲ. ಯಾರು ಚಾಲ್ತಿ ಖಾತೆ(Current Account)ಯಲ್ಲಿ ಆಗಾಗ ಹಣ ಇಡುತ್ತಲೂ ತೆಗೆಯುತ್ತಲೂ ಇರುತ್ತಾರೋ ಅವರಿಂದ ಬ್ಯಾಂಕ್ ಅದಕ್ಕಾಗಿ ಸೇವಾ ಶುಲ್ಕವನ್ನು ವಸೂಲಿ ಮಾಡುತ್ತದೆ. ಕನಿಷ್ಠ ಇಷ್ಟು ರೂಪಾಯಿ ಠೇವಣಿಯಿಡಬೇಕೆಂಬ ನಿಯಮವನ್ನೂ ವಿಧಿಸುತ್ತದೆ. ಅದರ ಮೂಲಕ ಅದು ಲೆಕ್ಕಪತ್ರ ಇಡುವ ಖರ್ಚನ್ನು ಭರ್ತಿ ಮಾಡಿಕೊಳ್ಳುತ್ತದೆ. ಈ ರೀತಿಯಿಂದ ಆದ ಲಾಭವನ್ನು ಬ್ಯಾಂಕಿನ ಪಾಲುದಾರರಲ್ಲಿ ಹಂಚಲಾಗುತ್ತದೆ.

## ಪರಿಣಾಮಗಳು

ಈ ರೀತಿಯಲ್ಲಿ ಸಾಹುಕಾರಿಕೆಯ ವ್ಯವಸ್ಥೆ ಮಾಡುವುದರಿಂದ ಹಿಂದಿನ ವೈಯಕ್ತಿಕ ಮತ್ತು ವಿಚ್ಛಿದ್ರ ಮಹಾ ಜನರಿಗಿಂತ ಇಂದಿನ ಸಾಮೂಹಿಕ ಮತ್ತು ಸುಸಂಘಟಿತ ಸಾಹುಕಾರರ ಪ್ರತಿಷ್ಠೆ ಮತ್ತು ಭರವಸೆಯು ಹಲವು ಪಟ್ಟು ಹೆಚ್ಚಾಯಿತು. ಇಡೀ ದೇಶದ ಸೊತ್ತು ಸಂಗ್ರಹವಾಗಿ ಅವರ ಬಳಿಗೆ ಬಂತು. ಈಗ ಒಂದೊಂದು ಬ್ಯಾಂಕಿನಲ್ಲಿ ಶತಕೋಟಿಗಟ್ಟಲೆ ರೂಪಾಯಿ ಶೇಖರಿಸಲ್ಪಡುತ್ತದೆ. ಕೆಲವು ಮಂದಿ ಪ್ರಭಾವಶಾಲಿ ಸಾಹುಕಾರರು ಅದನ್ನು ನಿಯಂತ್ರಿಸುತ್ತಾರೆ.

ಅವರು ಅದರ ಮೂಲಕ ತಮ್ಮ ದೇಶದ ಮಾತ್ರವಲ್ಲ ಇಡೀ ಜಗತ್ತಿನ ಆರ್ಥಿಕ, ನಾಗರಿಕ ಮತ್ತು ರಾಜಕೀಯ ಜೀವನದ ಮೇಲೆ ಪೂರ್ತಿ ಹಿಡಿತ ಸ್ಥಾಪಿಸುತ್ತಾರೆ. ಅದರ ಮೇಲೆ ತಮ್ಮ ಹಿತಾಸಕ್ತಿಗೆ ಅನುಗುಣವಾಗಿ ಆಡಳಿತ ನಡೆಸುತ್ತಿರುತ್ತಾರೆ. ಅವರ ಶಕ್ತಿಯನ್ನು ಅಂದಾಜಿಸಲಿಕ್ಕಾಗಿ ವಿಭಜನೆಗಿಂತ ಮೊದಲಿನ ಭಾರತದ ಬ್ಯಾಂಕುಗಳ ಸ್ಥಿತಿಯನ್ನೊಮ್ಮೆ ನೋಡಿ. ಭಾರತದ ಹತ್ತು ದೊಡ್ಡ ಬ್ಯಾಂಕುಗಳ ಬಳಿ ಇದ್ದ ಪಾಲು ಬಂಡವಾಳ ಕೇವಲ 17 ಕೋಟಿಯಾಗಿತ್ತು. ಆದರೆ ಠೇವಣಿಯ ಬಂಡವಾಳವು 612 ಕೋಟಿಯಾಗಿತ್ತು. ಈ ಬ್ಯಾಂಕುಗಳನ್ನು ಬೆರಳೆಣಿಕೆಯಷ್ಟು ಸಾಹುಕಾರರು ನಿಯಂತ್ರಿಸುತ್ತಿದ್ದರು. ಅವರ ಸಂಖ್ಯೆ ಹೆಚ್ಚೆಂದರೆ 150 ಇತ್ತು. ಆದರೆ ಬಡ್ಡಿಯ ಆಸೆಯಿಂದ ದೇಶದ ಲಕ್ಷಗಟ್ಟಲೆ ಜನರು ಇಷ್ಟು ದೊಡ್ಡ ಮೊತ್ತವನ್ನು ಅವರಿಗೆ ನೀಡಿದ್ದರು. ಈ ಶಕ್ತಿಶಾಲಿ ಅಸ್ತ್ರವನ್ನು ಅವರು ಹೇಗೆ ಮತ್ತು ಯಾವ ಉದ್ದೇಶಗಳಿಗಾಗಿ ಬಳಸುತ್ತಾರೆಂಬ ಚಿಂತೆ ಅವರಿಗಿರಲಿಲ್ಲ. ಇಷ್ಟು ದೊಡ್ಡ ಮೊತ್ತವು ಶೇಖರಣೆಯಾದ ಬಳಿಕ ಅವರು ದೇಶದ ವಾಣಿಜ್ಯ, ಉದ್ಯಮ ಮತ್ತು ಕೃಷಿ ಕ್ಷೇತ್ರಗಳ ಮೇಲೆ ಯಾವ ರೀತಿಯ ಪ್ರಭಾವ ಬೀರುತ್ತಾರೆಂಬುದನ್ನೂ ಆ ಪ್ರಭಾವವು ದೇಶದ ಒಟ್ಟು ಹಿತಾಸಕ್ತಿಗೆ ಪೂರಕವಾಗಿದೆಯೇ ಅಥವಾ ಕೇವಲ ಆ ಸ್ವಾರ್ಥಿಗಳ ಹಿತಾಸಕ್ತಿಯನ್ನು ರಕ್ಷಿಸುತ್ತದೆಯೇ ಎಂಬುದನ್ನು ಪ್ರತಿಯೊಬ್ಬ ವ್ಯಕ್ತಿಯೂ ಊಹಿಸಬಹುದಾಗಿದೆ.

ಇದು ಸಾಹುಕಾರರ ಸಂಘಟನೆಯು ಪ್ರಾಥಮಿಕ ಹಂತದಲ್ಲಿರುವ ಮತ್ತು ಬ್ಯಾಂಕ್ ಠೇವಣಿಗಳ ಒಟ್ಟು ಮೊತ್ತ, ಜನಸಂಖ್ಯೆಯ ಪ್ರಮಾಣದಲ್ಲಿ ಪ್ರತಿ ವ್ಯಕ್ತಿಗೆ ಕೇವಲ 7 ರೂಪಾಯಿ ಇರುವ ದೇಶದ ಸ್ಥಿತಿಯಾಯಿತು. ಇನ್ನು ಆ ಪ್ರಮಾಣವು ಪ್ರತಿ ವ್ಯಕ್ತಿಗೆ ಒಂದು ಸಾವಿರ ಮತ್ತು ಎರಡು ಸಾವಿರ ರೂಪಾಯಿ ಇರುವ ದೇಶಗಳ ಬಂಡವಾಳ ಕೇಂದ್ರೀಕರಣದ ಸ್ಥಿತಿ ಏನಾಗಿರಬಹುದೆಂದು ಊಹಿಸಿ ನೋಡಿ. 1936ರ ಅಂಕಿ-ಅಂಶಗಳ ಪ್ರಕಾರ ಕೇವಲ ವಾಣಿಜ್ಯ ಬ್ಯಾಂಕುಗಳ ಠೇವಣಿಯು ಅಮೇರಿಕಾದ ಜನಸಂಖ್ಯೆಯಲ್ಲಿ ಪ್ರತಿ ವ್ಯಕ್ತಿಗೆ 1317 ಪೌಂಡ್, ಬ್ರಿಟನ್‌ನ 1664 ಪೌಂಡ್, ಸ್ವಿಝರ್ಲೇಂಡಿನಲ್ಲಿ 275 ಪೌಂಡ್, ಜರ್ಮನಿಯಲ್ಲಿ 212 ಪೌಂಡ್ ಮತ್ತು ಫ್ರಾನ್ಸ್‌ನಲ್ಲಿ 165 ಪೌಂಡ್‌ನ ಲೆಕ್ಕದಲ್ಲಿದೆ. ಈ ದೇಶಗಳಲ್ಲಿ ಇಷ್ಟು ದೊಡ್ಡ ಪ್ರಮಾಣದಲ್ಲಿ ಜನರು ತಮ್ಮ ಉಳಿತಾಯವನ್ನು ತಮ್ಮ ಸಾಹುಕಾರರಿಗೆ ಒಪ್ಪಿಸುತ್ತಾರೆ. ಇಷ್ಟು ದೊಡ್ಡ ಪ್ರಮಾಣದಲ್ಲಿ ಬಂಡವಾಳವು ಮನೆ-ಮನೆಯಿಂದ ಹೊರಟು ಕೆಲವೇ ಕೈಗಳಲ್ಲಿ ಕೇಂದ್ರೀಕೃತವಾಗುತ್ತದೆ. ಯಾರ ಬಳಿ ಅದು ಕೇಂದ್ರೀಕೃತವಾಗುತ್ತದೋ ಅವರು ಯಾರ ಮುಂದೆಯೂ ಜವಾಬ್ದಾರರಲ್ಲ. ತಮ್ಮ ಚಿತ್ತದ ಹೊರತು ಬೇರೆ ಯಾರಿಂದಲೂ ಅವರು ಮಾರ್ಗದರ್ಶನವನ್ನು ಪಡೆಯುವವರಲ್ಲ. ತಮ್ಮ ಸ್ವಾರ್ಥದ ಹೊರತು ಇತರ ಯಾವ ವಿಷಯವನ್ನೂ ಪರಿಗಣಿಸುವವರಲ್ಲ. ಈ ಬೃಹತ್ ಮೊತ್ತದ 'ಬಾಡಿಗೆ' ಪಾವತಿ ಮಾಡಿ ಕಾರ್ಯತಃ ಅವರು ಅದರ ಒಡೆಯರಾಗಿ ಬಿಡುತ್ತಾರೆ. ಅದರ ಶಕ್ತಿಯ ಆಧಾರದಲ್ಲಿ ಅವರು ದೇಶಗಳ ಅದೃಷ್ಟದೊಂದಿಗೆ ಚೆಲ್ಲಾಟವಾಡುತ್ತಾರೆ. ಅವರು ಬಯಸಿದಲ್ಲಿ ಬರಗಾಲ ಉಂಟು ಮಾಡುತ್ತಾರೆ.

ಅವರು ಬಯಸಿದಲ್ಲಿ ಸುಗ್ಗಿ ಕಾಲ ಉಂಟು ಮಾಡುತ್ತಾರೆ. ಅವರು ಬಯಸಿದಾಗ ಯುದ್ಧ ಮಾಡಿಸುತ್ತಾರೆ. ಅವರು ಬಯಸಿದಾಗ ಶಾಂತಿ ಮಾಡಿಸುತ್ತಾರೆ. ತಮ್ಮ ಧನ ಪೂಜೆಯ ದೃಷ್ಟಿಕೋನದಿಂದ ಯಾವ ವಸ್ತುವನ್ನು ಉಪಯುಕ್ತವೆಂದು ಪರಿಗಣಿಸುತ್ತಾರೋ ಅದನ್ನು ಅಭಿವೃದ್ಧಿಪಡಿಸುತ್ತಾರೆ. ಯಾವುದನ್ನು ನಗಣ್ಯವೆಂದು ಬಗೆಯುತ್ತಾರೋ ಅದನ್ನು ಎಲ್ಲ ಸಂಪನ್ಮೂಲಗಳಿಂದ ವಂಚಿತಗೊಳಿಸುತ್ತಾರೆ. ಅವರ ನಿಯಂತ್ರಣವು ಕೇವಲ ಮಾರುಕಟ್ಟೆ ಮತ್ತು ಪೇಟೆಯ ಮೇಲಿರುವುದಲ್ಲ. ಜ್ಞಾನ-ಸಾಹಿತ್ಯಗಳ ತೊಟ್ಟಿಲು, ವೈಜ್ಞಾನಿಕ ಸಂಶೋಧನೆಯ ಕೇಂದ್ರ, ಪತ್ರಿಕೋದ್ಯಮ, ಧಾರ್ಮಿಕ ಸಂಸ್ಥೆ ಮತ್ತು ಸರಕಾರಿ ಇಲಾಖೆಗಳ ಮೇಲೂ ಅವರ ಆಡಳಿತವೇ ನಡೆಯುತ್ತದೆ. ಏಕೆಂದರೆ ಎಲ್ಲರೂ ತಮ್ಮ ಉಳಿವಿಗಾಗಿ ಅವರನ್ನೇ ಆಶ್ರಯಿಸಿರುತ್ತಾರೆ.

ಇದೊಂದು ಮಹಾಮಾರಿ. ಇದರ ವಿನಾಶಕಾರಿ ಪರಿಣಾಮಗಳ ಬಗ್ಗೆ ಪಾಶ್ಚಾತ್ಯ ರಾಷ್ಟ್ರಗಳ ಚಿಂತನಶೀಲ ವ್ಯಕ್ತಿಗಳೇ ಗೋಳಿಡುತ್ತಿದ್ದಾರೆ. ಸಂಪತ್ತಿನ ಇಷ್ಟು ದೊಡ್ಡ ಶಕ್ತಿಯು ಒಂದು ಸಣ್ಣ ಹೊಣೆಗೇಡಿ ಮತ್ತು ಸ್ವಾರ್ಥಿ ವರ್ಗದ ಕೈಯಲ್ಲಿ ಕೇಂದ್ರೀಕೃತಗೊಳ್ಳುವುದು ಇಡೀ ಸಾಮೂಹಿಕ ಜೀವನಕ್ಕೆ ಅಪಾಯಕಾರಿಯೆಂದು ಅವರು ಬೊಬ್ಬಿಡುತ್ತಿದ್ದಾರೆ. ಆದರೆ ನಮ್ಮಲ್ಲಿ ಈಗಲೂ ಅದರ ವಕಾಲತ್ತು ವಹಿಸಿ ಭಾಷಣಗಳನ್ನು ಮಾಡಲಾಗುತ್ತದೆ. ಹಿಂದಿನ ಕಾಲದ ಸಾಹುಕಾರರ ಬಡ್ಡಿ ಮಾತ್ರ ನಿಷಿದ್ಧವಾಗಿತ್ತೇ ಹೊರತು ಆಧುನಿಕ ಕಾಲದ ಬ್ಯಾಂಕುಗಳದ್ದಲ್ಲ. ಈ ಬ್ಯಾಂಕರ್‌ಗಳಂತೂ ಪರಿಶುದ್ಧ ವ್ಯಾಪಾರ ಮಾಡುತ್ತಿದ್ದಾರೆ. ಅವರ ವ್ಯಾಪಾರದಲ್ಲಿ ಹಣ ತೊಡಗಿಸುವುದು ಮತ್ತು ಅದರಿಂದ ತನ್ನ ಪಾಲನ್ನು ಪಡೆಯುವುದು 'ಹರಾಮ್' ಆಗುವುದಾದರೂ ಹೇಗೆ ಎಂದು ಅವರು ಪ್ರಶ್ನಿಸುತ್ತಾರೆ. ವಾಸ್ತವದಲ್ಲಿ ಹಿಂದಿನ ಕಾಲದ ಸಾಹುಕಾರರ ಮತ್ತು ಇಂದಿನ ಕಾಲದ ಬ್ಯಾಂಕರುಗಳ ಮಧ್ಯೆ ಇರುವ ವ್ಯತ್ಯಾಸವೆಂದರೆ- ಹಿಂದೆ ಆ ಜನರು ವೈಯಕ್ತಿಕವಾಗಿ ದೋಚುತ್ತಿದ್ದರು. ಈಗ ಅವರು ಸಂಘಟಿತರಾಗಿ ದರೋಡೆಕೋರರ ಒಂದು ದೊಡ್ಡ ಗುಂಪನ್ನೇ ಕಟ್ಟಿಕೊಂಡಿದ್ದಾರೆ. ಅವರ ಮಧ್ಯೆ ಇರುವ ಇನ್ನೊಂದು ವ್ಯತ್ಯಾಸವೇನೆಂದರೆ- ಹಿಂದೆ ಅವರು ಕನ್ನ ಹಾಕಲು ಬರುವಾಗ ಅದರ ಅಸ್ತ್ರಗಳನ್ನು ಅವರೇ ತರುತ್ತಿದ್ದರು. ಈಗ ಇಡೀ ದೇಶದ ಜನರು ತಮ್ಮ ಅಜ್ಞಾನ ಮತ್ತು ಅವಿವೇಕದಿಂದ ಅಸಂಖ್ಯ ಅಸ್ತ್ರಗಳನ್ನು ಅವರಿಗೆ 'ಬಾಡಿಗೆ'ಯ ಮೇಲೆ ಒದಗಿಸಿ ಕೊಟ್ಟಿದ್ದಾರೆ. ಬೆಳಕಿನಲ್ಲಿ ಅವರು ಆತನಿಗೆ 'ಬಾಡಿಗೆ' ಪಾವತಿಸುತ್ತಾರೆ ಮತ್ತು ಕತ್ತಲಲ್ಲಿ ಅವನ ವಾಸಸ್ಥಳದ ಮೇಲೆ ಅವನೇ ಒದಗಿಸಿದ ಆಯುಧಗಳಿಂದ ದರೋಡೆ ಮಾಡುತ್ತಾರೆ. ಈ 'ಬಾಡಿಗೆ'ಯ ಕುರಿತೇ ನಮ್ಮ ಜನರು "ಅದು ಪರಿಶುದ್ಧವೂ ಧರ್ಮಸಮ್ಮತವೂ ಆಗಿದೆ" ಎಂದು ಹೇಳುತ್ತಾರೆ.

ಬ್ಯಾಂಕ್ ತನ್ನ ಬಂಡವಾಳದ ಒಂದಂಶ(ಸುಮಾರು 10ರಿಂದ 25 ಶೇಕಡ)ವನ್ನು ನಗದು ರೂಪದಲ್ಲಿ ತನ್ನ ಬಳಿಯಿರಿಸುತ್ತದೆ. ಅದು ದೈನಂದಿನ ಲೇವಾದೇವಿಯಲ್ಲಿ ಬಳಕೆಯಾಗುತ್ತದೆ. ಆ ಬಳಿಕ ಒಂದಂಶವನ್ನು ಹಣದ ಮಾರುಕಟ್ಟೆ (Money Market)ಗೆ ಸಾಲ ನೀಡುತ್ತದೆ. ಇದು ಕೂಡಾ ನಗದು ಹಣದಂತೆ ಬೇಕಾದಾಗ ಪಡೆಯಬಹುದಾದಂತಹದ್ದಾಗಿರುತ್ತದೆ. ಅದರಿಂದ

$^1/_2$ ಶೇಕಡಾ ಬಡ್ಡಿಯೂ ಸಿಗುತ್ತದೆ. ಇನ್ನೊಂದು ಅಂಶವನ್ನು ಹುಂಡಿ ವ್ಯಾಪಾರ ಮತ್ತಿತರ ಅಲ್ಪಾವಧಿ ಸಾಲಗಳಲ್ಲಿ ತೊಡಗಿಸಲಾಗುತ್ತದೆ. ಅದೂ ಶೀಘ್ರದಲ್ಲೇ ಮರುಪಾವತಿಯಾಗುತ್ತಿರುತ್ತದೆ. ಆದ್ದರಿಂದ ಅವರಿಂದಲೂ ಕಡಿಮೆ ಬಡ್ಡಿ ವಸೂಲಿ ಮಾಡಲಾಗುತ್ತದೆ. ಉದಾ: ಶೇ. 2ರಿಂದ4. ಇನ್ನುಳಿದ ಬಂಡವಾಳದ ಒಂದು ಗಣನೀಯ ಭಾಗವನ್ನು ಹೆಚ್ಚು ಸುರಕ್ಷಿತವಾದ ಹೂಡಿಕೆಗಳಲ್ಲಿ ತೊಡಗಿಸಲಾಗುತ್ತದೆ. ಅಗತ್ಯ ಬಿದ್ದಾಗ ಅವುಗಳನ್ನು ಮಾರಾಟ ಮಾಡಿ ಬಂಡವಾಳವನ್ನು ಮರಳಿ ಪಡೆಯಬಹುದಾಗಿದೆ. ಅದರ ಮೇಲೆ 2ರಿಂದ 4 ಶೇಕಡಾ ಬಡ್ಡಿ ದೊರೆಯುತ್ತದೆ. ಉದಾ: ಸರಕಾರದ ಬಾಂಡುಗಳು (Government Securities) ಮತ್ತು ನಂಬಲರ್ಹ ಕಂಪೆನಿಗಳ ಪಾಲು ಬಂಡವಾಳ ಮತ್ತು ಸಾಲಪತ್ರ(Debenture) ಇತ್ಯಾದಿ. ನಗದು ಹಣದ ಜತೆಗೆ ಈ ಮೂರು ವಿಧದ ಹೂಡಿಕೆಗಳನ್ನು ಎಲ್ಲ ಬ್ಯಾಂಕ್‌ಗಳು ಮಾಡುತ್ತವೆ. ಏಕೆಂದರೆ ಇದು ಅದರ ಸುರಕ್ಷಿತತೆಗೆ ಪರ್ಯಾಪ್ತವಾಗಿದೆ. ಇದರಿಂದ ಬ್ಯಾಂಕ್ ಸುದೃಢವಾಗಿರುತ್ತದೆ. ಅಗತ್ಯ ಅಥವಾ ಅಪಾಯದ ವೇಳೆ ಇದು ಪ್ರಯೋಜನಕ್ಕೆ ಬರುತ್ತದೆ.

ಇದರ ನಂತರ ಒಂದು ದೊಡ್ಡ ಮೊತ್ತವನ್ನು ವ್ಯಾಪಾರದ ಸಾಲದ ರೂಪದಲ್ಲಿ ಗಣ್ಯ ವ್ಯಕ್ತಿಗಳು ಮತ್ತು ಸಾಮಾಜಿಕ ಸಂಸ್ಥೆಗಳಿಗೆ ಸಾಲದ ರೂಪದಲ್ಲಿ ನೀಡಲಾಗುತ್ತದೆ. ಇದು ಬ್ಯಾಂಕ್‌ನ ಆದಾಯದ ಪ್ರಮುಖ ಮೂಲ. ಇದರ ಮೇಲೆ ಬಡ್ಡಿ ದರವೂ ಅತ್ಯಧಿಕವಿರುತ್ತದೆ. ಪ್ರತಿಯೊಂದು ಬ್ಯಾಂಕ್ ತನ್ನ ಬಂಡವಾಳದ ಹೆಚ್ಚಿನ ಭಾಗವನ್ನು ಈ ಬಾಬ್ತಿನಲ್ಲಿ ಖರ್ಚು ಮಾಡಬಯಸುತ್ತದೆ. ಸಾಮಾನ್ಯವಾಗಿ ಬ್ಯಾಂಕು 30ರಿಂದ 60 ಶೇಕಡಾ ಬಂಡವಾಳವನ್ನು ಇದರಲ್ಲಿ ಹೂಡುತ್ತದೆ. ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಆರ್ಥಿಕ ಮತ್ತು ರಾಜಕೀಯ ಪರಿಸ್ಥಿತಿಗನುಗುಣವಾಗಿ ಈ ಹೂಡಿಕೆಯಲ್ಲಿ ಏರುಪೇರಾಗುತ್ತಿರುತ್ತದೆ.

ಈ ವಿವರಣೆಯಿಂದ ಸ್ಪಷ್ಟವಾಗುವುದೇನೆಂದರೆ ಬ್ಯಾಂಕ್ ತನ್ನ ಖಾತೆದಾರರಿಂದ ಪಡೆದ ಮತ್ತು ತಾನು ತೊಡಗಿಸಿದ ಬಂಡವಾಳವನ್ನು ಯಾವೆಲ್ಲಾ ಬಾಬ್ತಿನಲ್ಲಿ ವ್ಯಯಿಸುತ್ತದೋ ಅದೆಲ್ಲವೂ ಬಡ್ಡಿಯ ಸಾಲಗಳಾಗಿವೆ. ಅದು ಪ್ರತ್ಯಕ್ಷವಾಗಿಯಾಗಲೀ ಪರೋಕ್ಷವಾಗಿಯಾಗಲೀ ಸಮಾಜದ ಮೇಲೆ ಹೇರಲ್ಪಡುತ್ತದೆ. ಠೇವಣಿದಾರರಿಗೆ ನೀಡುವ ಬಡ್ಡಿಯು ಈ ಸಾಲಗಳ ಮೇಲೆ ಸಮಾಜದಿಂದ ಪಡೆದ ಬಡ್ಡಿಯಾಗಿದೆ. ಬ್ಯಾಂಕ್‌ಗಳು ಧರ್ಮಸಮ್ಮತವಾದ ಕೆಲವು ಸೇವೆಗಳನ್ನೂ ಸಲ್ಲಿಸುತ್ತವೆಂಬುದರಲ್ಲಿ ಸಂಶಯವಿಲ್ಲ. ಅದಕ್ಕೆ ಅದು 'ಕಮಿಷನ್'ನ ರೂಪದಲ್ಲಿ ಶುಲ್ಕವನ್ನು ಪಡೆಯುತ್ತದೆ. ಆದರೆ ಅದು ಬ್ಯಾಂಕಿನ ಒಟ್ಟು ಆದಾಯದ 5-10 ಶೇಕಡದಷ್ಟೂ ಇರುವುದಿಲ್ಲ.



# ಬಡ್ಡಿಯ ಕುರಿತು ಇಸ್ಲಾಮಿನ ವಿಧಿಗಳು

ಈ ತನಕ ನಮ್ಮ ಚರ್ಚೆಯು ವೈಚಾರಿಕವಾಗಿತ್ತು. ಇನ್ನು ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ಮುಹಮ್ಮದ್‌ರ(ಸ) ಚರ್ಯೆಯಲ್ಲಿ 'ಬಡ್ಡಿ' ಏನಾಗಿದೆ? ಅದರ ವ್ಯಾಪ್ತಿ ಎಷ್ಟು? ಅದನ್ನು ನಿಷೇಧಿಸಿದ ಇಸ್ಲಾಮಿನ ವಿಧಿಗಳು ಯಾವ ಯಾವ ವ್ಯವಹಾರಗಳಿಗೆ ಅನ್ವಯಿಸುತ್ತವೆ? ಇಸ್ಲಾಮ್ ಅದನ್ನು ಅಳಿಸಿ ಮಾನವನ ಆರ್ಥಿಕ ವ್ಯವಹಾರಗಳನ್ನು ಯಾವ ನಿಯಮದ ಆಧಾರದಲ್ಲಿ ನಡೆಸಬಯಸುತ್ತದೆ? ಎಂಬಿತ್ಯಾದಿ ಪ್ರಶ್ನೆಗಳ ಬಗ್ಗೆ ಅವಲೋಕಿಸೋಣ.

## ಬಡ್ಡಿಯ ತಾತ್ಪರ್ಯ

ಪವಿತ್ರ ಕುರ್‌ಆನಿನಲ್ಲಿ ಬಡ್ಡಿಗೆ ربوا 'ರಿಬಾ' ಎಂಬ ಪದವನ್ನು ಬಳಸಲಾಗಿದೆ. ಅದರ ಮೂಲವು رَبَ وَ 'ರಬವ' ಆಗಿದೆ. ಅದರ ಅರ್ಥ ಹೆಚ್ಚಳ, ಬೆಳವಣಿಗೆ, ವೃದ್ಧಿ ಮತ್ತು ಏರಿಕೆಯಾಗಿದೆ. رَبَا 'ರಬಾ' ಎಂದರೆ ಬೆಳೆಯಿತು ಮತ್ತು ಹೆಚ್ಚಾಯಿತು. رَبَا فلان الرابية ಆತ ಗುಡ್ಡವನ್ನು ಏರಿದ. رَبَا فلان السويق ಆತ ಹುರಿದ ಧಾನ್ಯದ ಹುಡಿಗೆ ನೀರು ಹಾಕಿದ ಮತ್ತು ಅದು ಉಬ್ಬಿತು. رَبَا فِيْ حِجْرِهِ ಆತ ಇಂತಿಂತಹವನ ಮಡಿಲಲ್ಲಿ ಪೋಷಣೆ ಪಡೆದನು. اَرْبَى الشيء ವಸ್ತುವನ್ನು ಬೆಳೆಸುವುದು. رابية ಔನ್ನತ್ಯ, ربوة ಸಾಮಾನ್ಯ ನೆಲಕ್ಕಿಂತ ಉನ್ನತವಾದ ನೆಲ. ಪವಿತ್ರ ಕುರ್‌ಆನಿನಲ್ಲಿ ಈ ಧಾತುವಿನಿಂದ ಉತ್ಪತ್ತಿಯಾದ ಪದಗಳು ಬಂದಿರುವ ಕಡೆಗಳಲ್ಲೆಲ್ಲಾ ಅದರ ತಾತ್ಪರ್ಯವು ಹೆಚ್ಚಳ, ಉನ್ನತಿ ಮತ್ತು ಬೆಳವಣಿಗೆಯಾಗಿದೆ:

فَإِذَآ أَنزَلْنَا عَلَيْهَا ٱلْمَآءَ ٱهْتَزَّتْ وَرَبَتْ

"ಅನಂತರ ನಾವು ಅದರ ಮೇಲೆ ಮಳೆಗರೆದಾಗ ಅದು ಒಮ್ಮೆಲೇ ಮೊಳೆಯಿತು, ಉಬ್ಬಿತು."

(ಪವಿತ್ರ ಕುರ್‌ಆನ್, 22:5)

يَمْحَقُ ٱللَّهُ ٱلرِّبَوٰا۟ وَيُرْبِى ٱلصَّدَقَٰتِ

"ಅಲ್ಲಾಹನು ಬಡ್ಡಿಯ ವ್ಯವಹಾರವನ್ನು ಅಳಿಸಿ ಬಿಡುತ್ತಾನೆ ಮತ್ತು ದಾನ-ಧರ್ಮಗಳನ್ನು ವೃದ್ಧಿಸುತ್ತಾನೆ."

(ಪವಿತ್ರ ಕುರ್‌ಆನ್, 2:276)

فَاحْتَمَلَ السَّيْلُ زَبَدًا رَّابِيًا

"ತರುವಾಯ ಮಹಾಪೂರವೆದ್ದಾಗ ಮೇಲ್ತಳದಲ್ಲಿ ನೊರೆಯೂ ಬಂದಿತು."

(ಪವಿತ್ರ ಕುರ್‌ಆನ್, 13:17)

فَأَخَذَهُمْ أَخْذَةً رَّابِيَةً ⑩

"ಆಜ್ಞೋಲ್ಲಂಘನೆ ಮಾಡಿದಾಗ ಅವನು ಅವರನ್ನು ಅತ್ಯುಗ್ರವಾಗಿ ಹಿಡಿದನು."

(ಪವಿತ್ರ ಕುರ್‌ಆನ್, 69:10)

أَن تَكُونَ أُمَّةٌ هِيَ أَرْبَىٰ مِنْ أُمَّةٍ

"ಒಂದು ಜನಾಂಗವು ಇನ್ನೊಂದು ಜನಾಂಗಕ್ಕಿಂತ ಹೆಚ್ಚು ಲಾಭ ಹೊಂದಲಿಕ್ಕಾಗಿ."

(ಪವಿತ್ರ ಕುರ್‌ಆನ್, 16:92)

وَآوَيْنَاهُمَا إِلَىٰ رَبْوَةٍ

"ಅವರನ್ನು ಒಂದು ಉನ್ನತ ಪೀಠ ಭೂಮಿಯಲ್ಲಿರಿಸಿದೆವು."

(ಪವಿತ್ರ ಕುರ್‌ಆನ್, 23:50)

ಇದೇ ಧಾತುವಿನಿಂದ الرِّبَوٰا (ರಿಬಾ) ಎಂಬ ಪದ ಹೊರಟಿದೆ. ಅದರ ಅರ್ಥ ಸಂಪತ್ತಿನ ಹೆಚ್ಚಳ. ಅದು ಮೂಲಕ್ಕಿಂತ ಹೆಚ್ಚಾಗುವುದು. ಈ ಅರ್ಥವನ್ನು ಕುರ್‌ಆನಿನಲ್ಲಿಯೇ ವಿವರಿಸಲಾಗಿದೆ:

وَذَرُوا مَا بَقِيَ مِنَ الرِّبَوٰا

"ಜನರಿಂದ ನಿಮಗೆ ಬರತಕ್ಕ ಬಡ್ಡಿಯನ್ನು ಬಿಟ್ಟು ಬಿಡಿರಿ."

(ಪವಿತ್ರ ಕುರ್‌ಆನ್, 2:278)

وَإِن تُبْتُمْ فَلَكُمْ رُءُوسُ أَمْوَالِكُمْ

"ಇನ್ನಾದರೂ ಪಶ್ಚಾತ್ತಾಪ ಪಟ್ಟರೆ ಅಸಲು ಹಣ ಪಡೆಯಲು ನೀವು ಹಕ್ಕುದಾರರಾಗಿರುತ್ತೀರಿ."

(ಪವಿತ್ರ ಕುರ್‌ಆನ್, 2:279)

وَمَا آتَيْتُم مِّن رِّبًا لِّيَرْبُوَ فِي أَمْوَالِ النَّاسِ فَلَا يَرْبُو عِندَ اللَّهِ

"ಜನರ ಸೊತ್ತಿನಲ್ಲಿ ಸೇರಿ ವೃದ್ಧಿಯಾಗಬೇಕೆಂದು ನೀವು ಕೊಡುವ ಬಡ್ಡಿಯು ಅಲ್ಲಾಹನ ಬಳಿ ವೃದ್ಧಿಸುವುದಿಲ್ಲ." (ಪವಿತ್ರ ಕುರ್‌ಆನ್, 30:39)

ಈ ಸೂಕ್ತಗಳಿಂದ ಸ್ಪಷ್ಟವಾಗಿ ತಿಳಿದು ಬರುವುದೇನೆಂದರೆ ಅಸಲು ಮೊತ್ತದ ಮೇಲೆ ಆಗುವ ಯಾವುದೇ ಹೆಚ್ಚಳವು ರಿಬಾ ಎನಿಸುವುದು. ಆದರೆ ಪವಿತ್ರ ಕುರ್‌ಆನ್ ಎಲ್ಲ ಹೆಚ್ಚಳವನ್ನು ನಿಷೇಧಿಸಿಲ್ಲ. ಹೆಚ್ಚಳವು ವ್ಯಾಪಾರದಲ್ಲೂ ಆಗುತ್ತದೆ. ಕುರ್‌ಆನ್ ಒಂದು ವಿಶಿಷ್ಟ ವಿಧದ ಹೆಚ್ಚಳವನ್ನು ನಿಷೇಧಿಸುತ್ತದೆ. ಆದ್ದರಿಂದಲೇ ಅದಕ್ಕೆ ರಿಬಾ ಎಂಬ ಪದವನ್ನು ಬಳಸಲಾಗಿದೆ. ಅರಬರ ಭಾಷೆಯಲ್ಲಿ ಇಸ್ಲಾಮಿಗಿಂತ ಮೊದಲೂ ಈ ರೀತಿಯ ವ್ಯವಹಾರಕ್ಕೆ ಇದೇ ಪಾರಿಭಾಷಿಕ ಹೆಸರನ್ನು ಬಳಸಲಾಗುತ್ತಿತ್ತು. ಆದರೆ ಅವರು ಬಡ್ಡಿಯನ್ನು ವ್ಯಾಪಾರದಂತೆ ಧರ್ಮಸಮ್ಮತವೆಂದು ಬಗೆದಿದ್ದರು. ಇಂದಿನ ಅಜ್ಞಾನಿಗಳು ಬಗೆದಿರುವಂತೆ! ಆದರೆ ಇಸ್ಲಾಮ್ ಒಂದು ವ್ಯಾಪಾರದಲ್ಲಿ ಮೂಲಧನದ ಮೇಲೆ ಆಗುವ ಹೆಚ್ಚಳವು ಬಡ್ಡಿಯಿಂದ ಆಗುವ ಹೆಚ್ಚಳಕ್ಕಿಂತ ಭಿನ್ನವಾಗಿದೆ ಎಂದು ತಿಳಿಸಿತು. ಮೊದಲನೆಯ ವಿಧದ ಹೆಚ್ಚಳವು ಧರ್ಮಬದ್ಧವಾಗಿದ್ದು ಎರಡನೆಯ ವಿಧದ ಹೆಚ್ಚಳವು ಧರ್ಮಬಾಹಿರವಾಗಿದೆ.

ذٰلِكَ بِاَنَّهُمْ قَالُوْٓا اِنَّمَا الْبَيْعُ مِثْلُ الرِّبٰوا ۘ وَاَحَلَّ اللّٰهُ الْبَيْعَ وَحَرَّمَ الرِّبٰوا ؕ

ಅವರು, "ವ್ಯಾಪಾರವೂ ಬಡ್ಡಿಯಂತೆ ಇರುವುದು ತಾನೆ? ಎಂದೆನ್ನುವುದೇ ಈ ಅವಸ್ಥೆಯಲ್ಲಿ ಸಿಲುಕಿ ಬಿದ್ದಿರಲು ಕಾರಣ. ವಸ್ತುತಃ ಅಲ್ಲಾಹನು ವ್ಯಾಪಾರವನ್ನು 'ಹಲಾಲ್' (ಧರ್ಮಸಮ್ಮತ) ಗೊಳಿಸಿರುತ್ತಾನೆ ಮತ್ತು ಬಡ್ಡಿಯನ್ನು ಹರಾಮ್(ನಿಷಿದ್ಧ)ಗೊಳಿಸಿರುತ್ತಾನೆ."

(ಪವಿತ್ರ ಕುರ್‌ಆನ್, 2:275)

'ರಿಬಾ' ಎಂಬುದು ಒಂದು ಪ್ರತ್ಯೇಕ ಹೆಚ್ಚಳದ ಹೆಸರಾಗಿತ್ತು. ಅದು ಪ್ರಸಿದ್ಧವಾಗಿತ್ತು. ಆದ್ದರಿಂದ ಪವಿತ್ರ ಕುರ್‌ಆನಿನಲ್ಲಿ ಅದರ ವಿವರಣೆಯನ್ನು ನೀಡಲಾಗಿಲ್ಲ. ಅಲ್ಲಾಹನು ಅದನ್ನು ನಿಷಿದ್ಧಗೊಳಿಸಿರುತ್ತಾನೆ ಎಂದು ಮಾತ್ರ ಹೇಳಿ ಅದನ್ನು ಬಿಟ್ಟು ಬಿಡಲು ಆದೇಶಿಸಲಾಗಿದೆ.

## ಅಜ್ಞಾನ ಕಾಲದ 'ರಿಬಾ'

ಅಜ್ಞಾನ ಕಾಲದಲ್ಲಿ ಯಾವೆಲ್ಲ ವ್ಯವಹಾರಗಳಿಗೆ 'ರಿಬಾ' (ಬಡ್ಡಿ) ಎಂಬ ಪದವು ಅನ್ವಯವಾಗುತ್ತಿತ್ತೋ ಅದರ ವಿವಿಧ ರೂಪಗಳು ಹದೀಸ್ ವರದಿ(ಪ್ರವಾದಿ ವಚನ)ಗಳಲ್ಲಿ ಪ್ರಸ್ತಾಪಗೊಂಡಿವೆ. ಕತಾದಃ ಹೇಳುತ್ತಾರೆ- "ಅಜ್ಞಾನ ಕಾಲದಲ್ಲಿ ಒಬ್ಬ ವ್ಯಕ್ತಿ ಇನ್ನೊಬ್ಬನಿಗೆ ಯಾವುದಾದರೂ ವಸ್ತುವನ್ನು ಮಾರುತ್ತಾನೆ ಮತ್ತು ಬೆಲೆಯನ್ನು ಪಾವತಿಸಲು ಒಂದು ನಿರ್ದಿಷ್ಟ ಸಮಯದ ತನಕ ಅವಧಿ ನೀಡುತ್ತಾನೆ. ಆ ಅವಧಿ ಕಳೆದು ಹೋದ ನಂತರ ಬೆಲೆಯು ಪಾವತಿ ಯಾಗದಿದ್ದರೆ ಆತನಿಗೆ ಇನ್ನಷ್ಟು ಅವಧಿಯನ್ನು ನೀಡಿ ಬೆಲೆಯನ್ನು ಏರಿಸುತ್ತಾನೆ."

ಮುಜಾಹಿದ್ ಹೇಳುತ್ತಾರೆ- "ಅಜ್ಞಾನ ಕಾಲದ 'ರಿಬಾ' ಹೇಗಿತ್ತೆಂದರೆ ಒಬ್ಬ ವ್ಯಕ್ತಿ ಇನ್ನೊಬ್ಬನಿಂದ ಸಾಲ ಪಡೆಯುತ್ತಾನೆ. ನನಗೆ ಇಂತಿಷ್ಟು ಅವಧಿಯ ಕಾಲಾವಕಾಶ ನೀಡಿದರೆ ನಾನು ಇಂತಿಷ್ಟು ಹಣ ಹೆಚ್ಚಿಗೆ ಕೊಡುವೆನೆಂದು ಹೇಳುತ್ತಾನೆ.

(ಇಬ್ನು ಜರೀರ್: ಭಾಗ-3, ಪುಟ:64)

ಅಬೂಬಕರ್ ಜಸ್ಸಾಸ್ ಅವರ ಸಂಶೋಧನೆಯು ಹೀಗಿದೆ- ಅಜ್ಞಾನ ಕಾಲದ ಜನರು ಪರಸ್ಪರ ಸಾಲದ ವ್ಯವಹಾರ ಮಾಡುವಾಗ ಇಂತಿಷ್ಟು ಅವಧಿಗೆ ಮೂಲ ಧನಕ್ಕಿಂತ ಇಂತಿಷ್ಟು ಹೆಚ್ಚಿಗೆ ಪಾವತಿಸಲಾಗುವುದೆಂದು ನಿರ್ಧರಿಸಲಾಗುತ್ತಿತ್ತು.(ಅಹ್ಕಾಮುಲ್ ಕುರ್‌ಆನ್- ಭಾಗ-1)

ಇಮಾಮ್ ರಾಝೀ ಅವರ ಸಂಶೋಧನೆಯ ಪ್ರಕಾರ- ಅಜ್ಞಾನ ಕಾಲದ ಕ್ರಮ ಹೇಗಿತ್ತೆಂದರೆ ಒಬ್ಬ ವ್ಯಕ್ತಿ ಇನ್ನೊಬ್ಬನಿಗೆ ಒಂದು ನಿರ್ದಿಷ್ಟ ಅವಧಿಗೆ ಸಾಲ ನೀಡುತ್ತಾನೆ. ಪ್ರತಿ ತಿಂಗಳು ಅವನಿಂದ ಒಂದು ನಿರ್ದಿಷ್ಟ ಮೊತ್ತವನ್ನು ಬಡ್ಡಿಯ ರೂಪದಲ್ಲಿ ವಸೂಲಿ ಮಾಡುತ್ತಾನೆ. ಆ ಅವಧಿ ಮುಗಿದ ಕೂಡಲೇ ಸಾಲವನ್ನು ಮರುಪಾವತಿ ಮಾಡುವಂತೆ ಹೇಳಲಾಗುತ್ತದೆ. ಆತ ಅದನ್ನು ಪಾವತಿಸದಿದ್ದರೆ ಅವನಿಗೆ ಮತ್ತಷ್ಟು ಅವಧಿಯನ್ನು ನೀಡಿ ಬಡ್ಡಿಯನ್ನು ಹೆಚ್ಚಿಸಲಾಗುತ್ತದೆ. (ತಫ್ಸೀರ್ ಕಬೀರ್- ಭಾಗ-2, ಪುಟ:351)

ವ್ಯಾಪಾರದ ಈ ರೂಪಗಳು ಅರೇಬಿಯಾದಲ್ಲಿ ಜಾರಿಯಲ್ಲಿದ್ದುವು. ಇದನ್ನೇ ಅರಬರು ತಮ್ಮ ಭಾಷೆಯಲ್ಲಿ 'ಅರ್ರಿಬಾ' ಎನ್ನುತ್ತಿದ್ದರು. ಇದನ್ನೇ ಪವಿತ್ರ ಕುರ್‌ಆನಿನಲ್ಲಿ ನಿಷೇಧಿಸಲಾಗಿದೆ.

## ವ್ಯಾಪಾರ ಮತ್ತು ಬಡ್ಡಿಯ ಮೂಲ ಭಿನ್ನತೆ

ಈಗ ವ್ಯಾಪಾರ ಮತ್ತು ಬಡ್ಡಿಯಲ್ಲಿರುವ ಮೂಲ ವ್ಯತ್ಯಾಸವೇನೆಂಬುದನ್ನು ನೋಡೋಣ. ಅದೇ ರೀತಿ ಬಡ್ಡಿಯ ವೈಶಿಷ್ಟ್ಯಗಳೇನು? ಯಾವ ಕಾರಣದಿಂದ ಅದು ವ್ಯಾಪಾರದಿಂದ ಭಿನ್ನವಾಗುತ್ತದೆ? ಇಸ್ಲಾಮ್ ಅದನ್ನು ಯಾಕೆ ನಿಷೇಧಿಸಿದೆ ಎಂಬುದನ್ನು ಅವಲೋಕಿಸೋಣ.

ವ್ಯಾಪಾರವೆಂದರೆ- ಮಾರಾಟಗಾರನು ಒಂದು ವಸ್ತುವನ್ನು ಮಾರಾಟ ಮಾಡುವ ಕೊಡುಗೆ ನೀಡುತ್ತಾನೆ. ಮಾರಾಟಗಾರ ಮತ್ತು ಖರೀದಿಸುವವನ ಮಧ್ಯೆ ಅದಕ್ಕೆ ಒಂದು ಬೆಲೆ ನಿರ್ಣಯವಾಗುತ್ತದೆ. ಆ ಬೆಲೆಗೆ ಪ್ರತಿಯಾಗಿ ಖರೀದಿಸುವವನು ಆ ವಸ್ತುವನ್ನು ಪಡೆಯುತ್ತಾನೆ. ಈ ವ್ಯವಹಾರದಲ್ಲಿ ಎರಡು ಸನ್ನಿವೇಶಗಳಿರುತ್ತವೆ. ಮಾರಾಟಗಾರನು ಒಂದೋ ಸ್ವಂತ ಶ್ರಮದಿಂದ ಮತ್ತು ತನ್ನ ಬಂಡವಾಳವನ್ನು ತೊಡಗಿಸಿ ಅದನ್ನು ಉತ್ಪಾದಿಸಿರುತ್ತಾನೆ ಅಥವಾ ಅವನು ಅದನ್ನು ಇತರರಿಂದ ಖರೀದಿಸಿ ತಂದಿರುತ್ತಾನೆ. ಎರಡೂ ಸನ್ನಿವೇಶಗಳಲ್ಲಿ ತನ್ನ ಬಂಡವಾಳವನ್ನು ಅದರ ಉತ್ಪಾದನೆ ಅಥವಾ ಖರೀದಿಯಲ್ಲಿ ತೊಡಗಿಸುತ್ತಾನೆ ಮತ್ತು ಶ್ರಮ ವಹಿಸಿ ಅದನ್ನು ಮಾರಾಟ ಮಾಡುತ್ತಾನೆ. ಅದುವೇ ಅವನ ಲಾಭವಾಗಿದೆ.

ಇದಕ್ಕೆ ವ್ಯತಿರಿಕ್ತವಾಗಿ ಬಡ್ಡಿಯೇನೆಂದರೆ- ಒಬ್ಬ ವ್ಯಕ್ತಿ ತನ್ನ ಬಂಡವಾಳವನ್ನು ಇನ್ನೊಬ್ಬನಿಗೆ ಸಾಲ ನೀಡುತ್ತಾನೆ. ಇಂತಿಷ್ಟು ಅವಧಿಯಲ್ಲಿ ನಾನು ನಿನ್ನಿಂದ ಇಂತಿಷ್ಟು ಶೇಕಡ ಹಣವನ್ನು ಹೆಚ್ಚುವರಿ ಪಡೆಯುವೆನು ಎಂಬ ನಿಬಂಧನೆ ಹೇರುತ್ತಾನೆ. ಈ ವ್ಯವಹಾರದಲ್ಲಿ ಬಂಡವಾಳದ ವಿರುದ್ಧ ಬಂಡವಾಳವೇ ಇದೆ. ಅವಧಿಗೆ ಬದಲಾಗಿ ಮೊದಲೇ ಒಂದು ಶರತ್ತಿನ ರೂಪದಲ್ಲಿ ನಿರ್ಧರಿಸಿದ ಹೆಚ್ಚುವರಿ ಹಣವಿದೆ. ಈ ಹೆಚ್ಚುವರಿ ಮೊತ್ತವನ್ನೇ

ಬಡ್ಡಿ ಎನ್ನಲಾಗುತ್ತದೆ. ಅದು ಯಾವುದೇ ಸೊತ್ತು ಅಥವಾ ವಸ್ತುವಿನ ಬೆಲೆಯಾಗಿರದೆ ಕೇವಲ ಅವಧಿಯ ಬೆಲೆಯಾಗಿದೆ. ಅದೇ ರೀತಿ ವ್ಯಾಪಾರದಲ್ಲೂ ಬೆಲೆಯು ನಿರ್ಧರಿಸಲ್ಪಟ್ಟಿದ್ದು ಅದನ್ನು ಪಾವತಿಸುವಲ್ಲಿ, ಉದಾಹರಣೆಗೆ ಒಂದು ತಿಂಗಳು ತಡವಾದರೆ, ಬೆಲೆಯಲ್ಲಿ ಇಂತಿಷ್ಟು ಹೆಚ್ಚಳ ಮಾಡಲಾಗುವುದೆಂದು ನಿರ್ಧಾರವಾಗಿದ್ದರೆ ಈ ಹೆಚ್ಚಳವೂ ಬಡ್ಡಿಯ ವ್ಯಾಖ್ಯೆಯಲ್ಲಿ ಒಳಪಡುತ್ತದೆ.

ಆದ್ದರಿಂದ ಬಡ್ಡಿಯ ವ್ಯಾಖ್ಯೆಯನ್ನು ಈ ರೀತಿ ಮಾಡಬಹುದು- ಸಾಲವಾಗಿ ನೀಡಿದ ಬಂಡವಾಳದ ಮೇಲೆ ಶರತ್ತಿನ ರೂಪದಲ್ಲಿ ಅವಧಿಗಾಗಿ ಪಡೆಯುವ ಹೆಚ್ಚುವರಿ ನಿಶ್ಚಿತ ಮೊತ್ತವನ್ನು ಬಡ್ಡಿ ಎನ್ನಲಾಗುತ್ತದೆ. ಇದರಲ್ಲಿ

1. ಬಂಡವಾಳದ ಮೇಲೆ ಹೆಚ್ಚುವರಿ.
2. ಅವಧಿಯನ್ನು ಪರಿಗಣಿಸಿ ಹೆಚ್ಚಳ ಮಾಡುವುದು.
3. ವ್ಯವಹಾರದಲ್ಲಿ ಅದು ಒಂದು ಶರತ್ತಾಗಿರುವುದು.

ಈ ಮೂರು ಅಂಶಗಳು ಸೇರಿ ಬಡ್ಡಿ ಆಗುತ್ತದೆ. ಈ ಮೂರು ಅಂಶಗಳಿರುವ ಪ್ರತಿಯೊಂದು ಸಾಲದ ವ್ಯವಹಾರವು ಒಂದು ಬಡ್ಡಿಯ ವ್ಯವಹಾರವಾಗಿದೆ. ಸಾಲವನ್ನು ಲಾಭದಾಯಕ ಕೆಲಸಕ್ಕಾಗಿ ಪಡೆಯಲಾಗಿದೆಯೋ, ವೈಯಕ್ತಿಕ ಅಗತ್ಯಕ್ಕಾಗಿ ಪಡೆಯಲಾಗಿದೆಯೋ, ಸಾಲ ಪಡೆದವನು ಶ್ರೀಮಂತನೋ, ಬಡವನೋ ಎಂಬುದೆಲ್ಲಾ ಇಲ್ಲಿ ಪರಿಗಣನಾರ್ಹವಲ್ಲ.

ವ್ಯಾಪಾರ ಮತ್ತು ಬಡ್ಡಿಯಲ್ಲಿರುವ ತಾತ್ವಿಕ ಭಿನ್ನತೆ ಈ ರೀತಿಯಿದೆ:

1. ವ್ಯಾಪಾರದಲ್ಲಿ ಮಾರಾಟಗಾರ ಮತ್ತು ಗ್ರಾಹಕನ ಮಧ್ಯೆ ಲಾಭವು ಸಮಾನವಾಗಿ ವಿನಿಮಯವಾಗುತ್ತದೆ. ಏಕೆಂದರೆ ಗ್ರಾಹಕನು ತಾನು ಮಾರಾಟಗಾರನಿಂದ ಖರೀದಿಸಿದ ವಸ್ತುವಿನಿಂದ ಪ್ರಯೋಜನ ಪಡೆಯುತ್ತಾನೆ. ಮಾರಾಟಗಾರನು ಗ್ರಾಹಕನಿಗೆ ಆ ವಸ್ತುವನ್ನು ಒದಗಿಸಲಿಕ್ಕಾಗಿ ವಿನಿಯೋಗಿಸಿದ ತನ್ನ ಶ್ರಮ, ಬುದ್ಧಿಶಕ್ತಿ ಮತ್ತು ಸಮಯಕ್ಕೆ ಪ್ರತಿಫಲವನ್ನು ಪಡೆಯುತ್ತಾನೆ. ಇದಕ್ಕೆ ವ್ಯತಿರಿಕ್ತವಾಗಿ ಬಡ್ಡಿಯ ವ್ಯವಹಾರದಲ್ಲಿ ಲಾಭದ ವಿನಿಮಯ ಸಮಾನವಾಗಿ ಆಗುವುದಿಲ್ಲ. ಬಡ್ಡಿ ಪಡೆಯುವಾತನು ತನಗೆ ಖಚಿತವಾಗಿ ಲಾಭದಾಯಕವಾದ ಒಂದು ನಿರ್ದಿಷ್ಟ ಮೊತ್ತವನ್ನು ಪಡೆಯುತ್ತಾನೆ. ಆದರೆ ಬಡ್ಡಿ ನೀಡುವಾತನಿಗೆ ಸಿಗುವುದು ಕೇವಲ ಅವಧಿ. ಅದು ಲಾಭದಾಯಕವಾಗಿರಲೂಬಹುದು, ಅಲ್ಲದಿರಲೂಬಹುದು. ಒಂದು ವೇಳೆ ಸಾಲಗಾರನು ತನ್ನ ವೈಯಕ್ತಿಕ ಅಗತ್ಯಗಳಿಗಾಗಿ ಸಾಲ ಪಡೆದಿದ್ದರೆ ಆ ಅವಧಿಯು ಅವನ ಪಾಲಿಗೆ ಖಂಡಿತ ಲಾಭದಾಯಕವಲ್ಲ. ಒಂದು ವೇಳೆ ಅವನು ಅದನ್ನು ಕೃಷಿ, ವ್ಯಾಪಾರೋದ್ದಿಮೆ ಅಥವಾ ಕೈಗಾರಿಕೆಗಳಲ್ಲಿ ತೊಡಗಿಸಲಿಕ್ಕಾಗಿ ಪಡೆದಿದ್ದರೆ ಆ ಅವಧಿಯಲ್ಲಿ ಲಾಭ ಮತ್ತು ನಷ್ಟದ ಸಮಾನ ಸಾಧ್ಯತೆಗಳಿವೆ. ಆದರೆ ಸಾಲ ನೀಡಿದವನಂತೂ ಅವನಿಗೆ ತನ್ನ ವ್ಯಾಪಾರದಲ್ಲಿ ಲಾಭವಾದರೂ ನಷ್ಟವಾದರೂ ಅವನಿಂದ ಒಂದು ನಿಶ್ಚಿತ ಮೊತ್ತವನ್ನು

ಪಡೆಯುತ್ತಾನೆ. ಆದ್ದರಿಂದ ಬಡ್ಡಿಯ ವ್ಯವಹಾರವು ಒಂದೋ ಒಬ್ಬನ ಲಾಭ ಮತ್ತು ಇನ್ನೊಬ್ಬನ ನಷ್ಟದಲ್ಲಾಗುತ್ತದೆ ಅಥವಾ ಒಬ್ಬನ ಖಚಿತ ಲಾಭ ಮತ್ತು ಇನ್ನೊಬ್ಬನ ಸಂಶಯಾಸ್ಪದ ಲಾಭದ ಮೇಲಾಗುತ್ತದೆ.

2. ವ್ಯಾಪಾರದಲ್ಲಿ ಮಾರಾಟಗಾರನು ಗ್ರಾಹಕನಿಂದ ಎಷ್ಟು ಹೆಚ್ಚು ಲಾಭ ಪಡೆದರೂ ಒಮ್ಮೆಯೇ ಪಡೆಯುತ್ತಾನೆ. ಆದರೆ ಬಡ್ಡಿಗೆ ಸಾಲ ನೀಡುವವನು ತನ್ನ ಬಂಡವಾಳದ ಮೇಲೆ ನಿರಂತರ ಲಾಭ ವಸೂಲಿ ಮಾಡುತ್ತಿರುತ್ತಾನೆ. ಸಮಯ ಕಳೆದಂತೆಲ್ಲಾ ಅವನ ಲಾಭವೂ ಹೆಚ್ಚುತ್ತಿರುತ್ತದೆ. ಸಾಲ ಪಡೆದಾತನು ಆ ಬಂಡವಾಳದಿಂದ ಎಷ್ಟೇ ಲಾಭ ಗಳಿಸಿದರೂ ಆ ಲಾಭಕ್ಕೆ ಒಂದು ಮಿತಿಯಿರುತ್ತದೆ. ಆದರೆ ಆ ಬಂಡವಾಳ ನೀಡಿದವನು ಪಡೆಯುವ ಬಡ್ಡಿಗೆ ಮಿತಿಯಿರುವುದಿಲ್ಲ. ಆತ ಅವನ ಎಲ್ಲ ಸಂಪಾದನೆ, ಎಲ್ಲ ಸಂಪನ್ಮೂಲಗಳು ಮತ್ತು ಅವನೆಲ್ಲಾ ಜೀವನ ಸಾಮಗ್ರಿಗಳನ್ನು ಕಸಿದುಕೊಂಡ ಬಳಿಕವೂ ಅದು ಮುಂದುವರಿಯುವುದು.

3. ವ್ಯಾಪಾರದಲ್ಲಿ ವಸ್ತು ಮತ್ತು ಅದರ ಬೆಲೆಯ ವಿನಿಮಯವಾದ ಕೂಡಲೇ ವ್ಯವಹಾರವು ಮುಕ್ತಾಯವಾಗುತ್ತದೆ. ಆದರ ನಂತರ ಗ್ರಾಹಕನು ಮಾರಾಟಗಾರನಿಗೆ ಏನೂ ಕೊಡಲಿಕ್ಕಿರುವುದಿಲ್ಲ. ಆದರೆ ಬಡ್ಡಿಯ ವ್ಯವಹಾರದಲ್ಲಿ ಸಾಲ ಪಡೆಯುವವನು ಆ ಬಂಡವಾಳವನ್ನು ಖರ್ಚು ಮಾಡಿರುತ್ತಾನೆ. ಆತ ಖರ್ಚಾದ ವಸ್ತುವನ್ನು ಮತ್ತೆ ಗಳಿಸಿ ಬಡ್ಡಿ ಸೇರಿಸಿ ಮರಳಿಸಬೇಕಾಗುತ್ತದೆ.

4. ವ್ಯಾಪಾರ, ಉದ್ದಿಮೆ, ಕೈಗಾರಿಕೆ ಮತ್ತು ಕೃಷಿಯಲ್ಲಿ ಮನುಷ್ಯನು ಶ್ರಮ ಮತ್ತು ಬುದ್ಧಿಶಕ್ತಿಯನ್ನು ವ್ಯಯಿಸಿ ಅದರ ಲಾಭವನ್ನು ಪಡೆಯುತ್ತಾನೆ. ಬಡ್ಡಿ ವ್ಯವಹಾರದಲ್ಲಿ ಅವನು ತನ್ನ ಅಗತ್ಯಕ್ಕಿಂತ ಹೆಚ್ಚಿನ ಹಣವನ್ನು ಕೊಟ್ಟು ಯಾವುದೇ ಶ್ರಮ ಮತ್ತು ಬುದ್ಧಿವಂತಿಕೆಯನ್ನು ವ್ಯಯಿಸದೆ ಇತರರ ಗಳಿಕೆಯ ದೊಡ್ಡ ಪಾಲನ್ನು ಕಬಳಿಸುತ್ತಾನೆ. ಅವನು ಪಾಲುದಾರನಂತಿರುವುದಿಲ್ಲ. ಪಾಲುದಾರನು ಲಾಭ-ನಷ್ಟಗಳೆರಡರಲ್ಲೂ ಭಾಗೀದಾರನಾಗಿರುತ್ತಾನೆ. ಅವನು ಲಾಭ-ನಷ್ಟದ ಪರಿಗಣನೆಯಿಲ್ಲದೆ ಮತ್ತು ಲಾಭದ ಪ್ರಮಾಣದ ಲೆಕ್ಕವಿಲ್ಲದೆ ತನ್ನ ನಿರ್ಧಾರಿತ ಪಾಲನ್ನು ಪಡೆಯುತ್ತಿರುತ್ತಾನೆ.

## ನಿಷೇಧದ ಕಾರಣ

ಈ ಕಾರಣಗಳಿಂದಾಗಿಯೇ ಅಲ್ಲಾಹನು ವ್ಯಾಪಾರವನ್ನು ಧರ್ಮಸಮ್ಮತಗೊಳಿಸಿ ಬಡ್ಡಿಯನ್ನು ನಿಷೇಧಿಸಿರುತ್ತಾನೆ. ಈ ಕಾರಣಗಳಲ್ಲದೆ ಬಡ್ಡಿಯನ್ನು ನಿಷೇಧಿಸಲು ಇತರ ಕಾರಣಗಳೂ ಇವೆ. ಅವುಗಳನ್ನು ನಾವು ಈ ಹಿಂದೆ ಪ್ರಸ್ತಾಪಿಸಿದ್ದೇವೆ. ಅದು ಮನುಷ್ಯನಲ್ಲಿ ಲೋಭ, ಸ್ವಾರ್ಥ, ಕಠಿಣ ಹೃದಯತೆ, ನಿಷ್ಕರುಣೆ ಮತ್ತು ಧನ ಪೂಜೆಯ ಗುಣಗಳನ್ನು ಬೆಳೆಸುತ್ತದೆ. ಅದು ಜನಾಂಗಗಳಲ್ಲಿ ಪರಸ್ಪರ ದ್ವೇಷವನ್ನು ಉಂಟು ಮಾಡುತ್ತದೆ. ಅದು ದೇಶದ ಜನರ ಮಧ್ಯೆ ಪರಸ್ಪರ ಸಹಾನುಭೂತಿ ಮತ್ತು ಸಹಕಾರದ ಸಂಬಂಧವನ್ನು ಮುರಿಯುತ್ತದೆ. ಅದು ಜನರಲ್ಲಿ ರೂಪಾಯಿಯನ್ನು ಕೂಡಿ ಹಾಕುವ ಮತ್ತು ತನ್ನ ವೈಯಕ್ತಿಕ ಹಿತಾಸಕ್ತಿಯ ಪ್ರಗತಿಗೆ

ಖರ್ಚು ಮಾಡುವ ಮನೋಭಾವವನ್ನು ಸೃಷ್ಟಿಸುತ್ತದೆ. ಅದು ಸಮಾಜದಲ್ಲಿ ಸಂಪತ್ತಿನ ಸ್ವತಂತ್ರ ಹರಿಯುವಿಕೆಯನ್ನು ತಡೆಯುತ್ತದೆ. ಅದು ಸಂಪತ್ತಿನ ಹರಿಯುವಿಕೆಯನ್ನು ವಿರುದ್ಧ ದಿಕ್ಕಿಗೆ ತಿರುಗಿಸುತ್ತದೆ. ಸಂಪತ್ತು ದರಿದ್ರರಿಂದ ಧನಿಕರೆಡೆಗೆ ಹರಿಯತೊಡಗುತ್ತದೆ. ಕಟ್ಟಕಡೆಗೆ ಅದು ಇಡೀ ಸಮಾಜದ ವಿನಾಶಕ್ಕೆ ಹೇತುವಾಗುತ್ತದೆ. ಈ ವಿಷಯ ಆರ್ಥಿಕತೆಯ ಬಗ್ಗೆ ಆಳವಾದ ಜ್ಞಾನ ಉಳ್ಳವರಿಗೆ ತಿಳಿಯದೆ ಇಲ್ಲ. ಬಡ್ಡಿಯ ಈ ಎಲ್ಲ ದುಷ್ಪರಿಣಾಮಗಳನ್ನು ನಿರಾಕರಿಸಲು ಸಾಧ್ಯವಿಲ್ಲ. ಇಸ್ಲಾಮ್ ಯಾವ ಚೌಕಟ್ಟಿನಲ್ಲಿ ಮನುಷ್ಯನ ನೈತಿಕ ತರಬೇತಿ, ನಾಗರಿಕ ವ್ಯವಸ್ಥೆ ಮತ್ತು ಆರ್ಥಿಕ ಸಂಘಟನೆ ಮಾಡಬಯಸುತ್ತದೋ ಅದರ ಪ್ರತಿಯೊಂದು ಅಂಶದೊಂದಿಗೆ ಬಡ್ಡಿಯು ಸಂಘರ್ಷಿಸುತ್ತದೆ. ಬಡ್ಡಿ ವ್ಯವಹಾರದ ಅತ್ಯಲ್ಪ ಮತ್ತು ಅತ್ಯಂತ ನಿರುಪದ್ರವಿ ಎಂದು ಭಾಸವಾಗುವ ಅಂಶ ಕೂಡಾ ಆ ಇಡೀ ಚೌಕಟ್ಟನ್ನು ಕೆಡಿಸಿ ಬಿಡುತ್ತದೆ. ಆದ್ದರಿಂದಲೇ ಅಲ್ಲಾಹನು ಕುರ್‌ಆನಿನಲ್ಲಿ ಬಡ್ಡಿಯನ್ನು ನಿಷೇಧಿಸುತ್ತಾ ಇಷ್ಟು ಕಠಿಣ ಶಬ್ದಗಳನ್ನು ಪ್ರಯೋಗಿಸಿದ್ದಾನೆ.

يَا أَيُّهَا الَّذِينَ آمَنُوا اتَّقُوا اللَّهَ وَذَرُوا مَا بَقِيَ مِنَ الرِّبَا إِن كُنتُم مُّؤْمِنِينَ ۝
فَإِن لَّمْ تَفْعَلُوا فَأْذَنُوا بِحَرْبٍ مِّنَ اللَّهِ وَرَسُولِهِ

"ಓ ಸತ್ಯವಿಶ್ವಾಸಿಗಳೇ! ಅಲ್ಲಾಹನನ್ನು ಭಯಪಡಿರಿ. ನೀವು ನಿಜಕ್ಕೂ ವಿಶ್ವಾಸಿಗಳಾಗಿರುವಿರಾದರೆ, ಜನರಿಂದ ನಿಮಗೆ ಬರತಕ್ಕ ಬಡ್ಡಿಯನ್ನು ಬಿಟ್ಟು ಬಿಡಿರಿ. ನೀವು ಹಾಗೆ ಮಾಡದಿದ್ದರೆ ಅಲ್ಲಾಹನ ಮತ್ತು ಅವನ ಸಂದೇಶವಾಹಕರ ಕಡೆಯಿಂದ ನಿಮ್ಮ ವಿರುದ್ಧ ಯುದ್ಧ ಘೋಷಣೆಯಿದೆಯೆಂದು ನಿಮಗೆ ತಿಳಿದಿರಲಿ." (2: 278-279)

## ನಿಷೇಧದ ಕಾಠಿಣ್ಯ

ಕುರ್‌ಆನಿನಲ್ಲಿ ಇನ್ನೂ ಅನೇಕ ಪಾಪ ಕಾರ್ಯಗಳನ್ನು ನಿಷೇಧಿಸಿರುವ ವಿಧಿಗಳಿವೆ. ಅವುಗಳ ಬಗ್ಗೆ ಕಠಿಣ ಎಚ್ಚರಿಕೆಯನ್ನೂ ನೀಡಲಾಗಿದೆ. ಆದರೆ ಇಷ್ಟು ಕಠಿಣ ಪದಗಳನ್ನು ಬೇರಾವ ಪಾಪ ಕಾರ್ಯದ ಬಗ್ಗೆಯೂ ಬಳಸಲಾಗಿಲ್ಲ.* ಆದ್ದರಿಂದಲೇ ಪ್ರವಾದಿ(ಸ) ಇಸ್ಲಾಮೀ ರಾಷ್ಟ್ರದಲ್ಲಿ ಬಡ್ಡಿಯನ್ನು ತಡೆಯಲಿಕ್ಕಾಗಿ ಕಠಿಣ ಶ್ರಮ ವಹಿಸಿದರು. ಪ್ರವಾದಿ(ಸ) ನಜ್ರಾನಿನ ಕ್ರೈಸ್ತರೊಂದಿಗೆ ಮಾಡಿದ ಒಪ್ಪಂದದಲ್ಲಿ ನೀವು ಬಡ್ಡಿಯ ವ್ಯವಹಾರ ನಡೆಸಿದರೆ ಈ ಒಪ್ಪಂದವು ಅನೂರ್ಜಿತಗೊಳ್ಳುವುದು ಮತ್ತು ನಾವು ನಿಮ್ಮ ವಿರುದ್ಧ ಯುದ್ಧ ಹೂಡಬೇಕಾಗುವುದು ಎಂದು ಬರೆದಿದ್ದರು. ಅರೇಬಿಯಾದಲ್ಲಿ ಬನೂ ಮುಗೀರಾ ಗೋತ್ರದ ಬಡ್ಡಿಕೋರರು ಬಹಳ ಪ್ರಸಿದ್ಧರಾಗಿದ್ದರು. ಮಕ್ಕಾ ವಿಜಯದ ಬಳಿಕ ಪ್ರವಾದಿ(ಸ) ಅವರ

* ಒಂದು ಹದೀಸ್‌ನಲ್ಲಿ ಬಡ್ಡಿಯ ಪಾಪವು ತನ್ನ ತಾಯಿಯ ಜೊತೆ ವ್ಯಭಿಚಾರ ಮಾಡುವುದಕ್ಕಿಂತ ಎಪ್ಪತ್ತು ಪಟ್ಟು ಅಧಿಕವೆಂದು ಹೇಳಲಾಗಿದೆ. (ಇಬ್ನುಮಾಜಃ)

ಎಲ್ಲ ಬಡ್ಡಿಯ ಹಣವನ್ನು ವಜಾಗೊಳಿಸಿದರು. ಅವರು ಬಡ್ಡಿ ವ್ಯವಹಾರವನ್ನು ತೊರೆಯದಿದ್ದರೆ ಅವರ ವಿರುದ್ಧ ಯುದ್ಧ ಹೂಡಬೇಕೆಂದು ಮಕ್ಕಾದ ಅಧಿಕಾರಿಗಳಿಗೆ ಸೂಚಿಸಿದರು. ಪ್ರವಾದಿ ವರ್ಯರ(ಸ) ಪಿತೃ ಸಹೋದರ ಹ. ಅಬ್ಬಾಸ್‌ರವರು(ರ) ಒಬ್ಬ ದೊಡ್ಡ ಸಾಹುಕಾರರಾಗಿದ್ದರು. ಎಲ್ಲ ಬಡ್ಡಿ ವ್ಯವಹಾರಗಳನ್ನು ಅನೂರ್ಜಿತಗೊಳಿಸಲಾಗಿದೆ ಎಂದು ವಿದಾಯ ಹಜ್ಜ್‌ನ ಸಂದರ್ಭದಲ್ಲಿ ಪ್ರವಾದಿ(ಸ) ಘೋಷಿಸಿದರು. ಮೊಟ್ಟ ಮೊದಲು ನಾನು ನನ್ನ ಪಿತೃ ಸಹೋದರರಾದ ಅಬ್ಬಾಸ್‌ರವರ(ರ) ಬಡ್ಡಿಯನ್ನು ವಜಾಗೊಳಿಸುತ್ತೇನೆ ಎಂದು ಘೋಷಿಸಿದರು. ಪ್ರವಾದಿ(ಸ) ಹೇಳಿದರು- "ಬಡ್ಡಿ ಪಡೆಯುವ, ಕೊಡುವ, ಅದರ ಲೆಕ್ಕ ಪತ್ರಗಳನ್ನು ಬರೆಯುವ ಮತ್ತು ಅದಕ್ಕೆ ಸಾಕ್ಷಿ ನಿಲ್ಲುವವರ ಮೇಲೆ ಅಲ್ಲಾಹನ ಶಾಪವಿದೆ."

ಈ ಎಲ್ಲ ವಿಧಿಗಳ ಉದ್ದೇಶ ಬಡ್ಡಿಯ ಕೇವಲ ಒಂದು ವಿಧ ಅರ್ಥಾತ್: 'ಸಾಹುಕಾರಿ ಬಡ್ಡಿ'(Usury)ಯನ್ನು ನಿಷೇಧಿಸುವುದು ಮತ್ತು ಅದರ ಹೊರತು ಬಡ್ಡಿಯ ಇತರ ವಿಧಗಳ ದ್ವಾರವನ್ನು ತೆರೆದಿಡುವುದಾಗಿರಲಿಲ್ಲ. ವಾಸ್ತವದಲ್ಲಿ ಅದರ ಉದ್ದೇಶ ಬಂಡವಾಳಶಾಹಿ ನೈತಿಕತೆ, ಬಂಡವಾಳಶಾಹಿ ವಿಚಾರಧಾರೆ, ಬಂಡವಾಳಶಾಹಿ ನಾಗರಿಕ ವ್ಯವಸ್ಥೆ ಮತ್ತು ಬಂಡವಾಳಶಾಹಿ ಆರ್ಥಿಕ ಪದ್ಧತಿಯನ್ನು ನಿರ್ಮೂಲನ ಮಾಡಿ ಅದರ ಸ್ಥಾನದಲ್ಲಿ ಲೋಭಕ್ಕೆ ಬದಲು ಔದಾರ್ಯ, ಸ್ವಾರ್ಥಕ್ಕೆ ಬದಲು ಸಹಾನುಭೂತಿ ಮತ್ತು ಪರಸ್ಪರ ಸಹಕಾರ, ಬಡ್ಡಿಗೆ ಬದಲು ಝಕಾತ್, ಬ್ಯಾಂಕಿಗೆ ಬದಲು ರಾಷ್ಟ್ರೀಯ ಬೈತುಲ್‌ಮಾಲ್ ಇರುವಂತಹ ವ್ಯವಸ್ಥೆಯನ್ನು ಸ್ಥಾಪಿಸುವುದಾಗಿದೆ. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಸಹಕಾರಿ ಸಂಘ, ವಿಮಾ ಕಂಪನಿ ಮತ್ತು ಪ್ರಾವಿಡೆಂಟ್ ಫಂಡ್‌ಗಳಂತಹ ವ್ಯವಸ್ಥೆಯನ್ನು ಸ್ಥಾಪಿಸುವ ಪ್ರಮೇಯವೇ ಬರದಂತೆ ಹಾಗೂ ಕಮ್ಯೂನಿಸಮ್‌ನ ಅನೈಸರ್ಗಿಕ ವ್ಯವಸ್ಥೆಗೆ ದಾರಿ ಮಾಡಿ ಕೊಡುವ ಆಸ್ಪದವಿಲ್ಲದಂತೆ ಅದು ತನ್ನ ಆರ್ಥಿಕ ವ್ಯವಸ್ಥೆಯನ್ನು ಸಮತೋಲನದಲ್ಲಿ ಸ್ಥಾಪಿಸಬಯಸುತ್ತದೆ.

ಆದರೆ ಇಂದು ನಮ್ಮ ಅವಿವೇಕ, ದೌರ್ಬಲ್ಯ ಮತ್ತು ದುರದೃಷ್ಟದಿಂದಾಗಿ ಇಸ್ಲಾಮಿನ ಈ ನೈತಿಕ, ನಾಗರಿಕ ಮತ್ತು ಆರ್ಥಿಕ ವ್ಯವಸ್ಥೆಯು ಸಂಪೂರ್ಣ ಕುಸಿದು ಬಿದ್ದಿದೆ. ಬಂಡವಾಳಶಾಹಿತ್ವವು ನಮ್ಮ ಮೇಲೆ ಹೇರಲ್ಪಟ್ಟಿದೆ. ನಮ್ಮಲ್ಲಿ ಝಕಾತ್‌ನ ಸಂಗ್ರಹ ಮತ್ತು ಅದರ ಸರಿಯಾದ ವಿತರಣೆಗೆ ಯಾವ ಸಂಸ್ಥೆಯೂ ಬಾಕಿ ಉಳಿದಿಲ್ಲ. ನಮ್ಮ ಶ್ರೀಮಂತರು ಜಿಪುಣರೂ ಸ್ವೇಚ್ಛಾಚಾರಿಗಳೂ ಆಗಿದ್ದಾರೆ. ನಮ್ಮ ಬಡವರಿಗೆ ಯಾವ ಆಸರೆಯೂ ಉಳಿದಿಲ್ಲ. ನಾವು ಇಸ್ಲಾಮಿನ ನೈತಿಕತೆಯನ್ನು ಕಳಕೊಂಡೆವು. ಅದರ ಒಂದೊಂದು ಮೇರೆಯನ್ನು ಮುರಿದೆವು. ನಾವು ಮದ್ಯಪಾನ, ಜೂಜಾಟ ಮತ್ತು ವ್ಯಭಿಚಾರದಲ್ಲಿ ಸಿಲುಕಿದೆವು. ಸುಖಲೋಲುಪತೆ ಮತ್ತು ದುಂದುಗಾರಿಕೆಯ ನಿಕೃಷ್ಟ ಗುಣಗಳು ನಮ್ಮಲ್ಲಿ ಉಂಟಾದುವು. ದುಂದುವೆಚ್ಚದ ಎಲ್ಲ ವಿಧಾನಗಳನ್ನು ನಾವು ನಮ್ಮ ಜೀವನಾವಶ್ಯಕತೆಗಳಲ್ಲಿ ಸೇರಿಸಿಕೊಂಡೆವು. ಬಡ್ಡಿಯ ಸಾಲವಿಲ್ಲದೆ ಮದುವೆಗಳನ್ನು ಮಾಡಲು, ಕಾರುಗಳನ್ನು ಖರೀದಿಸಲು, ಬಂಗ್ಲೆಗಳನ್ನು ನಿರ್ಮಾಣ ಮಾಡಲು, ಅಲಂಕಾರ, ಆಡಂಬರ ಮತ್ತು

ಸುಖಲೋಲುಪತೆಯ ಸಾಮಗ್ರಿಗಳನ್ನು ಸಂಗ್ರಹಿಸಲು ನಮ್ಮಿಂದ ಸಾಧ್ಯವಾಗಲಿಲ್ಲ. ನಮ್ಮಲ್ಲಿ ಪರಸ್ಪರ ಸಹಕಾರದ ಸ್ಫೂರ್ತಿ ಮತ್ತು ಅದಕ್ಕಾಗಿ ಸಂಘಟಿಸುವ ಗುಣವು ಸಂಪೂರ್ಣವಾಗಿ ಅಳಿಯಿತು. ಇದರ ಪರಿಣಾಮವಾಗಿ ನಮ್ಮ ಆರ್ಥಿಕ ಸ್ಥಿತಿಯು ತೀರಾ ಹದಗೆಟ್ಟಿತು. ನಮ್ಮ ಪೈಕಿ ಪ್ರತಿಯೊಬ್ಬರ ಜೀವನವು ಸಂಪೂರ್ಣವಾಗಿ ತನ್ನದೇ ಆರ್ಥಿಕ ಸಂಪನ್ಮೂಲಗಳನ್ನು ಅವಲಂಬಿಸುವಂತಾಯಿತು. ಆದ್ದರಿಂದ ಅವನು ಅನಿವಾರ್ಯವಾಗಿ ಇಸ್ಲಾಮಿನ ತತ್ವಗಳನ್ನು ತೊರೆದು ತನ್ನ ಭವಿಷ್ಯದ ಸುರಕ್ಷತೆಗಾಗಿ ಬಂಡವಾಳಶಾಹಿತ್ವದ ತತ್ವಗಳನ್ನು ಅನುಸರಿಸತೊಡಗಿದನು. ಬ್ಯಾಂಕಿನಲ್ಲಿ ಠೇವಣಿ ಇರಿಸಿದ. ವಿಮಾ ಕಂಪೆನಿಯಲ್ಲಿ ವಿಮೆ ಮಾಡಿಸಿದ. ಸಹಕಾರಿ ಸಂಘದ ಸದಸ್ಯನಾದ. ಅಗತ್ಯ ಬಿದ್ದಾಗ ಬಂಡವಾಳಶಾಹಿ ಸಂಸ್ಥೆಗಳಿಂದ ಬಡ್ಡಿಗೆ ಸಾಲ ಪಡೆದು ತನ್ನ ಆವಶ್ಯಕತೆಯನ್ನು ಪೂರ್ತಿಗೊಳಿಸಿದ. ಇಂದು ಇದೆಲ್ಲವೂ ನಮ್ಮ ಪಾಲಿಗೆ ಅನಿವಾರ್ಯವಾಗಿದೆ ಎಂಬುದು ಖಚಿತ. ಆದರೆ ಈ ಪರಿಸ್ಥಿತಿಯನ್ನು ಉಂಟು ಮಾಡಲಿಕ್ಕೆ ಕಾರಣ ಇಸ್ಲಾಮ್ ಆಗಿದೆಯೇ? ಅಲ್ಲ. ಖಂಡಿತ ಅಲ್ಲ. ನಾವು ಈ ಪರಿಸ್ಥಿತಿಯಲ್ಲಿ ಸಿಲುಕಿದ್ದು ಏಕೆಂದರೆ, ಇಸ್ಲಾಮ್ ಯಾವ ಆರ್ಥಿಕ ವ್ಯವಸ್ಥೆಯನ್ನು ನಮಗೆ ಕಲಿಸಿತ್ತೋ ಅದರ ಒಂದೊಂದು ಸ್ತಂಭವನ್ನೂ ನಾವು ಕೆಡವಿ ಹಾಕಿದೆವು. ಆದ್ದರಿಂದ ಇಸ್ಲಾಮೀ ಕಾನೂನನ್ನು ಉಲ್ಲಂಘಿಸಿ ನಾವೇ ತಂದು ಕೊಂಡಂತಹ ಆರ್ಥಿಕ ಸಂಕಷ್ಟಗಳನ್ನು ನಿವಾರಿಸಲಿ ಕ್ಕಾಗಿ ಇಸ್ಲಾಮಿನ ಒಂದು ವಿಧಿಯನ್ನು ಉಲ್ಲಂಘಿಸುವುದು ಧರ್ಮಸಮ್ಮತವಾಗುತ್ತದೆಯೇ? ಮತ್ತೆ ನಾವು ಇಸ್ಲಾಮಿನಿಂದಲೇ ಈ ಕಾನೂನು ಉಲ್ಲಂಘನೆಯ ಅನುಮತಿ ಯಾಚಿಸಬಹುದೇ? ನಮ್ಮನ್ನು ಝಕಾತ್‌ನ ಸಾಮೂಹಿಕ ವ್ಯವಸ್ಥೆಯನ್ನು ಜಾರಿಗೊಳಿಸುವುದರಿಂದ ತಡೆದವರು ಯಾರು? ಪರಸ್ಪರ ಸಹಕಾರದ ಇಸ್ಲಾಮೀ ತತ್ವವನ್ನು ಅನುಸರಿಸುವುದರಿಂದ ನಮ್ಮನ್ನು ಯಾರು ತಡೆದಿದ್ದಾರೆ? ಇಸ್ಲಾಮಿನ ವಾರೀಸು ಹಕ್ಕು ನಿಯಮವನ್ನು ಪಾಲಿಸುವುದನ್ನು ಯಾರು ನಮಗೆ ಅಡ್ಡಿಪಡಿಸಿದ್ದಾರೆ? ಸರಳ ದೇವಭಕ್ತ ಮತ್ತು ಮಿತವ್ಯಯದ ಜೀವನ ನಡೆಸಲು ನಮಗೆ ಏನು ಅಡ್ಡಿಯಿದೆ? ನಮ್ಮ ಹಾಸಿಗೆಗೆ ಮೀರಿ ಕಾಲು ಚಾಚುವಂತೆ ಯಾರು ನಮ್ಮನ್ನು ಒತ್ತಾಯಪಡಿಸುತ್ತಿದ್ದಾರೆ? ಪಾಶ್ಚಾತ್ಯ ಸಂಸ್ಕೃತಿಯ ದುಂದುಗಾರಿಕೆಯ ಪದ್ಧತಿಗಳನ್ನು ಜೀವನಾವಶ್ಯಕತೆಗಳಲ್ಲಿ ಸೇರಿಸಿಕೊಳ್ಳಬೇಕೆಂದು ಯಾರು ನಮಗೆ ವಿಧಿಸಿದ್ದಾರೆ? ಸಂಪಾದನೆಯ ಧರ್ಮಸಮ್ಮತ ಮಾರ್ಗಗಳನ್ನು ಬಿಟ್ಟು ಬಂಡವಾಳಶಾಹಿಯಾಗುವ ಆಸೆಯಲ್ಲಿ ನಿಷಿದ್ಧ ಸಂಪಾದನೆಗೆ ಇಳಿಯುವಂತೆ ಯಾರು ನಮ್ಮನ್ನು ಬಲವಂತಪಡಿಸಿದ್ದಾರೆ? ನಮ್ಮ ಶ್ರೀಮಂತರ ಕೈ ಹಿಡಿದು ಅವರು ತಮ್ಮ ಬಂಧುಗಳು, ನೆರೆಹೊರೆಯವರು, ಮಿತ್ರರು, ಸಮುದಾಯದ ವಿಧವೆಯರು, ತಬ್ಬಲಿಗಳು, ಅಂಗವಿಕಲರು ಮತ್ತು ದುರ್ಬಲರಿಗೆ ನೆರವಾಗದಂತೆ ಯಾರು ತಡೆದಿದ್ದಾರೆ? ತಮ್ಮ ಸಂಪತ್ತನ್ನು ಯೂರೋಪ್, ಅಮೇರಿಕ ಮತ್ತು ಜಪಾನ್‌ನ ಕಾರ್ಖಾನೆಗಳ ಮಾಲಕರಿಗೆ ಕೊಡಲು ಅವರನ್ನು ಒತ್ತಾಯಿಸಿದ್ದು ಯಾರು? ನಮ್ಮ ಮಧ್ಯಮ ವರ್ಗದ ಜನರು ತಮ್ಮ ಮದುವೆ- ಮರಣಗಳ ವೇಳೆ ತಮ್ಮ ಸಾಮರ್ಥ್ಯಕ್ಕಿಂತ ಹೆಚ್ಚು ವ್ಯಯಿಸಬೇಕೆಂದೂ ಶ್ರೀಮಂತರ ಜತೆ ಸ್ಪರ್ಧೆಗಿಳಿಯಬೇಕೆಂದೂ

ತಮ್ಮ ಆರ್ಥಿಕ ಮೂಲಕ್ಕಿಂತ ಮಿಗಿಲಾದ ಆಡಂಬರವನ್ನು ಮೆರೆಯಬೇಕೆಂದೂ ದುಂದುವೆಚ್ಚ ಗಳನ್ನು ಮಾಡಲು ಬಡ್ಡಿಯ ಸಾಲ ಪಡೆಯಬೇಕೆಂದೂ ಬಲವಂತ ಪಡಿಸಿದವರು ಯಾರು? ಇವೆಲ್ಲಾ ನಾವು ನಮ್ಮ ಇಷ್ಟದಂತೆ ಸ್ವೀಕರಿಸಿದವುಗಳು. ಇಸ್ಲಾಮಿನ ದೃಷ್ಟಿಯಲ್ಲಿ ಇವೆಲ್ಲವೂ ಅಪರಾಧಗಳಾಗಿವೆ. ಇಂದು ನಾವು ಈ ಅಪರಾಧಗಳನ್ನು ತೊರೆದು ಇಸ್ಲಾಮಿನ ಆರ್ಥಿಕ ವ್ಯವಸ್ಥೆಯನ್ನು ಮತ್ತೆ ಸ್ಥಾಪಿಸಿದರೆ ನಮ್ಮೆಲ್ಲ ಆರ್ಥಿಕ ಸಂಕಷ್ಟಗಳೂ ದೂರವಾಗುವುವು. ಅದು ಇಂದು ನಮ್ಮನ್ನು ಬಡ್ಡಿ ತಿನ್ನುವ ಮತ್ತು ತಿನ್ನಿಸುವ ಮಹಾ ಅಪರಾಧದಲ್ಲಿ ಸಿಲುಕಿಸಿದೆ. ನಾವು ಈ ಅಪರಾಧಗಳನ್ನು ತೊರೆಯದಿದ್ದರೆ ಈ ಅಪರಾಧಗಳ ಪರಿಣಾಮವಾಗಿ ಜನಿಸಿದ ಅಪರಾಧವನ್ನಾ ದರೂ ಅಪರಾಧವೆಂದು ತಿಳಿದು ಮಾಡೋಣ. ಒಬ್ಬನು ಶುದ್ಧ ಮತ್ತು ನಿರ್ಮಲ ಆಹಾರವನ್ನು ತೊರೆದು ಅಶುದ್ಧ ವಸ್ತುವಲ್ಲದೆ ಯಾವುದೂ ತಿನ್ನಲಿಕ್ಕೆ ಸಿಗದಂತಹ ಸ್ಥಳಕ್ಕೆ ತಲುಪಿದ್ದರೆ ಆತ ಹೊಟ್ಟೆ ತುಂಬ ಹೊಲಸು ತಿನ್ನಲಿ ಮತ್ತು ತಿನ್ನಿಸಲಿ. ಆದರೆ ಆತ ಆ ಹೊಲಸನ್ನು ಶುದ್ಧವೆಂದು ಸಾರಬೇಕೆಂದು ಒತ್ತಾಯಿಸುವುದೇಕೆ?

ನಾವು ಮೊದಲೇ ಹೇಳಿರುವಂತೆ ಬಡ್ಡಿ ಪಡೆಯುವ ಅಥವಾ ಪಡೆಯದಿರುವ ಚರ್ಚೆಯು ಮುಂದಿನ ಹಂತದ ಚರ್ಚೆಯಾಗಿದೆ. ಮೊದಲು ನೀವು ಇಸ್ಲಾಮಿನ ಆರ್ಥಿಕ ವ್ಯವಸ್ಥೆಯನ್ನು ಪಾಲಿಸುತ್ತೀರಾ ಅಥವಾ ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯನ್ನು ಪಾಲಿಸುತ್ತೀರಾ ಎಂಬುದನ್ನು ನಿರ್ಧಾರ ಮಾಡಿ. ಮೊದಲನೆಯ ಪದ್ಧತಿಯನ್ನು ನೀವು ಅನುಸರಿಸುವುದಾದರೆ ಅಲ್ಲಿ ಬಡ್ಡಿಯ ವ್ಯವಹಾರ ನಡೆಸುವ ಅಗತ್ಯವಾಗಲೀ ಆಸ್ಪದವಾಗಲೀ ಇರುವುದಿಲ್ಲ. ಏಕೆಂದರೆ ಇಸ್ಲಾಮೀ ಆರ್ಥಿಕ ವ್ಯವಸ್ಥೆಯ ಎಲ್ಲ ವ್ಯವಹಾರಗಳೂ ಬಡ್ಡಿಯ ವ್ಯವಹಾರ ಮಾಡುವ ಸಂಸ್ಥೆಗಳಿಲ್ಲದೆಯೇ ನಡೆಯುತ್ತದೆ. ಬಡ್ಡಿಯ ವ್ಯವಹಾರವನ್ನು ಮಾಡಿ ಆ ಇಸ್ಲಾಮೀ ಆರ್ಥಿಕ ವ್ಯವಸ್ಥೆಯನ್ನು ಕೆಡಿಸಬಯಸುವವರನ್ನು ಅದು ಅಪರಾಧಿಯೆಂದು ಪರಿಗಣಿಸುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ನೀವು ಎರಡನೆಯ ಪದ್ಧತಿಯನ್ನು ಅರ್ಥಾತ್, ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯನ್ನು ಅನುಸರಿಸಿದರೆ ಇಸ್ಲಾಮ್ ಅದನ್ನು ತನ್ನ ವಿರುದ್ಧ ಬಂಡಾಯವೆಂದು ಪರಿಗಣಿಸುತ್ತದೆ. ಈ ಬಂಡಾಯದ ಸ್ಥಿತಿಯಲ್ಲಿ ಇಸ್ಲಾಮಿನ ಆರ್ಥಿಕ ನಿಯಮಗಳ ಪೈಕಿ ಬಂಡವಾಳಶಾಹಿ ವ್ಯವಸ್ಥೆಯ ತತ್ವಕ್ಕೆ ವಿರುದ್ಧವಾದ ಎಲ್ಲ ನಿಯಮಗಳನ್ನು ಮುರಿಯಬೇಕಾಗುವುದು. ಇನ್ನು ನೀವು ಇಸ್ಲಾಮೀ ಕಾನೂನುಗಳನ್ನು ಮುರಿದು ಬಂಡವಾಳಶಾಹಿ ವ್ಯವಸ್ಥೆಯನ್ನು ಅನುಸರಿಸಿಯೂ ಇಸ್ಲಾಮಿನ ದೃಷ್ಟಿಯಲ್ಲಿ ಅಪರಾಧಿಯಾಗಬಾರದೆಂಬ ಬಯಕೆ ನಿಮ್ಮದಾದರೆ ಅದರ ಅರ್ಥ ನಿಜವಾಗಿ ನೀವು ಇಸ್ಲಾಮನ್ನು ಅನುಸರಿಸುವ ಬದಲು ಇಸ್ಲಾಮ್ ನಿಮ್ಮನ್ನು ಅನುಸರಿಸಬೇಕೆಂದೂ ಅದು ನಿಮ್ಮನ್ನು ತನ್ನಲ್ಲಿ ಉಳಿಸಲಿಕ್ಕಾಗಿ ತನ್ನ ತತ್ವಗಳನ್ನು ಬದಲಾಯಿಸಿ ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯನ್ನು ಅನುಸರಿಸಬೇಕೆಂದೂ ಆಗಿದೆ.